# ಕೊರವಂಜಿ

ಜುಲೈ ೧೯೪೨



ಸಂಪಾದಕರು:
ಶ್ರೀ. ರಾ. ಶಿ.

ಸಲಹೆಗಾರರು:
ಶ್ರೀ. ನಾ. ಕಸ್ತೂರಿ

ಚಿತ್ರಕಾರರು:
ಶ್ರೀ. ಆರ್. ಕೆ. ಲಕ್ಷ್ಮಣ್



ಬಿಡಿಪತ್ರಿಕೆ
ಎರಡಾಣೆ.

ಶ್ರೀನಗೆಯ ಮಾಸ ಪತ್ರಿಕೆ

# ಕೊರವಂಜಿ

ಕೊರವಂಜಿಯು ಪ್ರತಿ ತಿಂಗಳ ಪಾಡ್ಯವೂ ಹೊರಬೀಳುವುದು.

ತಿಳಿ ಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನು ದ್ವೇಷಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಸಂಪಾದಕೀಯ ಪತ್ರ ವ್ಯವಹಾರಗಳನ್ನು ಸಂಪಾದಕರು. ನಂ. ೧, ವೆಂಕಟ ರಂಗೈಯ್ಯಂಗಾರ್ ರಸ್ತೆ, ಮಲ್ಲೇಶ್ವರ, ಬೆಂಗಳೂರಿನಲ್ಲಿ ನಡೆಸಬೇಕು.

ವ್ಯವಸ್ಥಾಪಕರಲ್ಲಿ ಮಿಕ್ಕ ವಿಷಯಗಳನ್ನು ಪ್ರಸ್ತಾಪಿಸಬೇಕು.

ವ್ಯವಸ್ಥಾಪಕರು,
೨೮-ಎ, ಲಾಲ್‌ಬಾಗ್ ರೋಡ್, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ರೂ. 2-0-0** **ಬಿಡಿ ಪ್ರತಿ 0-2-0**

## ವಿಷಯಾನುಕ್ರಮಣಿಕೆ



ಸಂಪುಟ ೧]    ಕೊರವಂಜಿ, ಜುಲೈ, ೧೯೪೨    [ಸಂಚಿಕೆ ೪

# ಕುಹ ಕಿಡಿಗಳು

ಕಾಲೇಜಿನ ಅಧ್ಯಾಪಕರಿಬ್ಬರು ಮೊನ್ನೆ ಟೆನ್ನಿಸ್ ಪಂದ್ಯದಲ್ಲಿ ಹುಡುಗರಿಬ್ಬರನ್ನು ಸೋಲಿಸಿದರಂತೆ.

—ಚತುರತೆ ಚಮತ್ಕಾರಗಳು ನಮ್ಮ ಹುಡುಗರಿಗೆ ಸಾಕಷ್ಟು ಇದೆಯೆಂಬುವದಕ್ಕೆ ಇದು ನಿದರ್ಶನ.

*    *    *

ನಮ್ಮೂರಿನಲ್ಲಿ ಸಿಪಾಯಿಗಳಿಗೂ ಸಾರ್ವಜನಿಕರಿಗೂ ಸೌಹಾರ್ದ್ಯ ಉಂಟಾಗಲೆಂದು (Canteens) ಕಾಂಟೀನುಗಳನ್ನು ತೆರೆದಿರುವರಂತೆ.

—ಅಲ್ಲಿಗೆ ಹೋಗಿ ಬಂದ ಸಿಪಾಯಿಯೊಬ್ಬನು 'ಯುದ್ಧಕ್ಕಾದರೂ ಹೋಗಬಹುದು, ಸಾರ್ವಜನಿಕರ ಜತೆಯಲ್ಲಿ ಕಾಲ ಕಳೆಯುವುದು ಕಷ್ಟ' ಎಂದು ಹೇಳಿದನಂತೆ.

*    *    *

ಹೆಬ್ಬಿ ಗುಬ್ಬಾಲಿಯು ಕಡೆಯ ಪಕ್ಷ ಸಾವಿರ ವರ್ಷಗಳಿಂದಲಾದರೂ ಇವೆ ಎಂದು ಪರಿಶೋಧಕರ ಮತ.

—ಆ ಕಾಲದಲ್ಲಿ ಹಲವಾರು ವಾಕ್ಯಗಳು ಕನ್ನಡಕ್ಕೆ ಹೊಸದಾಗಿ ಸೇರಿಬಂದಿವೆ.

*    *    *

ಕವಿವರ್ಯನೊರ್ವನು ಒಂದು ಕಣ್ಣು ಮುಚ್ಚಿಕೊಂಡು ಪದ್ಯ ಬರೆಯುವನಂತೆ.

—ನಮ್ಮ ಸ್ನೇಹಿತ ಕವಿಗಳೆಲ್ಲರೂ ಎರಡೂ ಕಣ್ಣು ಮುಚ್ಚಿಕೊಂಡು ಬರೆಯುತ್ತಾರೆಂಬ ಸಂದೇಹಕ್ಕೆ ಬಹಳ ಕಾರಣಗಳಿವೆ.

ಕಸದ ಬುಟ್ಟಿಗಳ ತಯಾರಿಕೆಯು ಬಹಳವಾಗಿ ನಡೆಯುತ್ತಿದೆಯಂತೆ.

—ಇದಕ್ಕೂ ಪ್ರಜಾಪ್ರತಿನಿಧಿ ಸಭೆ ಸೇರುವುದಕ್ಕೂ ಏನೇನೂ ಸಂಬಂಧವಿಲ್ಲ ವೆಂದು ತಿಳಿದು ಬಂದಿದೆ.

* * *

ಬಂಗಾಳೀ ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಬೇಕೆಂದು, ಧಾರ ವಾಡದ ಪತ್ರಿಕೆಯ ಸಲಹೆ.

—ಧಾರವಾಡದ ,ಕನ್ನಡವನ್ನು ಮೊದಲು ಭಾಷಾಂತರ ಮಾಡಿದರೆ ಒಳಿತಲ್ಲವೇ?




ತಪ್ಪು ಕಣ್ಣಿನದೋ, ಕ್ಯಾಲಂಡರದೋ!

# ಹುರಿಗಾಳು



ಯುದ್ಧ ಭೀತಿಯಿಂದ ಮದ್ರಾಸ್ ಬಿಟ್ಟು ಮಲ್ಲೇಶ್ವರಕ್ಕೆ ಬಂದಿರುವ ಒಬ್ಬರು ಮಹನೀಯರು ಮೊನ್ನೆ ಒಂದು ಸಾರ್ವಜನಿಕ ಸಭೆಯಲ್ಲಿ "ದಿಗಿಲು ಬೀಳಬೇಡಿರೋ" ಅಂತ ಉಪದೇಶ ಮಾಡಿದರಂತೆ. ಉಷ್ಣಂ ಉಷ್ಣೇನ ಶಾಮ್ಯತಿ!

೨

ಸರ್ ಷಣ್ಮುಗಂ ಚೆಟ್ಟಿಯವರು ಮೊನ್ನೆ ಒಂದು ಭಾಷಣದಲ್ಲಿ ತಾವು ಅಮೇರಿಕಾ ದೇಶಕ್ಕೆ ಹೋದದ್ದು ಏತಕ್ಕಾಗಿ, ಎಂದು ವಿವರಿಸಿದರು. ಆದರೆ ಸಭಿಕರಿಗೆ ಬೇಕಾಗಿದ್ದದ್ದು, 'ಯಾಕೆ ಹಿಂತಿರುಗಿ ಬಂದರು?' ಎಂಬ ಪ್ರಶ್ನೆಗೆ ಉತ್ತರ!

೩

ಒಂದು ಹಸುವು ಒಂದು ಕುರಿಯನ್ನು ಈಯಿತು ಎಂಬ ಸಮಾಚಾರ ಬಂದಿದೆ.

೪

ವಿಮಾನಧಾಳಿ ಸೂಚನಾ ಸೈರನ್ನೊಂದು ಕೆಟ್ಟುಹೋದಾಗ ಅದನ್ನು ರಿಪೇರಿ ಮಾಡಲು ವಿಪರೀತ ಕಷ್ಟವಾಯಿತಂತೆ. ಮುಟ್ಟಿದರೆ ಸಾಕು, ಅದು ಏರು ತಗ್ಗಿನ ಶಿಳ್ಳನ್ನು ಕೊಡುತ್ತಿತ್ತು. ಆದ್ದರಿಂದ ರಿಪೇರಿ ಮಾಡಲು ಹೋದವರೆಲ್ಲರೂ ತಕ್ಷಣವೇ ಗುಣಿಗಳಲ್ಲಿ ಕೂರುತ್ತಿದ್ದರು. ಕಡೆಗೆ ಕಿವುಡರೊಬ್ಬರಿಂದ ಕೆಲಸವನ್ನು ಆಗ ಮಾಡಿಸಬಹುದೆಂದು ಆಜ್ಞೆ ಹೊರಟಿದೆ.

೫

ತನ್ನ ಕೆಲಸಕ್ಕೆ ರಾಜಿನಾಮೆ ಕೊಡುತ್ತಾ ಒಬ್ಬ ಜವಾನ ಹೀಗೆ ಬರೆದಿದ್ದಾನಂತೆ "ಅಮ್ಮಾವರು ಸಾಹೇಬರನ್ನ ಮೂರುಹೊತ್ತೂ ಯಾವ ರೀತಿ ಮಾತನಾಡಿಸುತ್ತಾರೋ ಅದೇ ರೀತಿ ನನ್ನನ್ನೂ ಮಾತನಾಡಿಸುತ್ತಾರೆ. ಈ ಅವಮಾನವನ್ನು ನಾನು ಸಹಿಸಲಾರೆ."

೬

"ಉಪವಾಸದಿಂದ ನರಳುತ್ತಿರುವ ಕೋಟ್ಯಾಂತರ ಬಡವರಿಗಾಗಿ ನನ್ನ ಮನ ಕುದಿಯುತ್ತಿದೆ" ಎಂದು ಬಾಪೂಜಿಯವರು ಬರೆದಿರುವರು. ಆದರೆ ಕೋಟ್ಯಾಂತರ ಜನರು ಅನೇಕವೇಳೆ ಅವರ ಉಪವಾಸದಿಂದ ಕಳವಳ ಪಡುತ್ತಾರೆ ಎಂಬುದನ್ನೂ ಅವರು ಗಮನಿಸಲಿ.

೭

"ಟಪಾಲ್ ಸ್ಟಾಂಪಿನಲ್ಲಿ ಗೋಂದಿರುವ ಭಾಗವನ್ನು ನೆಕ್ಕುವುದು ತಿಳಿಯದವರು ಮಾಡುವ ಕೆಲಸ" ಎಂದು ಆರೋಗ್ಯ ಪ್ರಚಾರಕರೊಬ್ಬರು ಹೇಳಿದರು. ಗೋಂದಿಲ್ಲದ ಭಾಗವನ್ನು ನೆಕ್ಕುವುದಕ್ಕಿಂತ ಇದೇ ಹೆಚ್ಚು ಬುದ್ಧಿವಂತಿಕೆಯಲ್ಲವೆ?

೮

ಎಡಗೈಯಲ್ಲಿ ಏಳು ಬೆರಳುಳ್ಳ ಒಂದು ಮಗು ಮೊನ್ನೆ ಹೆರಿಗೆ ಆಸ್ಪತ್ರೆಯಲ್ಲಿ ಹುಟ್ಟಿತಂತೆ. ನೋಡಿದಿರಾ! ದೇವರ ಅಪಾರ ಕರುಣೆಯನ್ನು! ಏಳು ತಂತಿ ಪಿಟೀಲುಗಳು ಪ್ರಚಾರಕ್ಕೆ ಬಂದಾಗ, ಏಳು ಬೆರಳಿನ ಎಡಗೈಗಳು ಸಿದ್ಧ.

೯

ಪುರೋಹಿತರೊಬ್ಬರು ಬಟ್ಟಲೊಂದನ್ನು ಸೊಂಟಕ್ಕೆ ಸೇರಿಸುವ ಸಮಯದಲ್ಲಿ ಯಜಮಾನರು ಅಲ್ಲಿಗೆ ಬಂದರು. ಆಗ



ಅವರು ಅದನ್ನು ವ್ಯಸನದಿಂದ ಮೆಲ್ಲಗೆ ಕೆಳಗಿಡುತ್ತಾ "ಕ್ಷಮಿಸಬೇಕು! ತಪ್ಪಾಯಿತು" ಅಂತ ಅಂಗಲಾಚಿದರು. "ತಪ್ಪಂತೆ, ತಪ್ಪು!"........ಅಂತ ಯಜಮಾನರು ಪ್ರಾರಂಭಿಸಿದಾಗ, ಪುರೋಹಿತರು "ತಪ್ಪಲ್ಲದೆ ಇನ್ನೇನು? ಮುಲಾಮು ಅಂತ ತಿಳಿಯದೆ ಬೆಳ್ಳಿ ಅಂತ ಮೋಸಹೋದೆ" ಅಂದರು.

೧೦

ಕಾಡುಪ್ರಾಣಿಗಳು ಬರಬರುತ್ತಾ ಕಡಿಮೆಯಾಗುತ್ತಿದೆ. ಎಂದು ಶಿಕಾರಿ ಪತ್ರಿಕೆಯೊಂದು ವ್ಯಸನದಿಂದ ಬರೆಯುತ್ತಿದೆ. ಬಹುಶಃ ಅವರ ಸಂಪಾದಕರು ನಮ್ಮೂರು ಕ್ಲಬ್ಬಿಗೆ ಬಂದಿಲ್ಲ ಅಂತ ಕಾಣುತ್ತದೆ. ಅಲ್ಲಿ ದಿನವೂ ೩ ಗಂಟೆಯಿಂದ ೯ರವರೆವೆಗೆ ನಡೆಯುವ ಇಸ್ಪೀಟು ಕಛೇರಿಗೆ ಅವರಿಗೆ ಆಹ್ವಾನವೀಯುತ್ತೇವೆ.

೧೧

ಮೊನ್ನೆ ಬಸ್ಸಿನಲ್ಲಿ ಕುಳಿತು ಪೇಪರೋದುತ್ತಿದ್ದ ಒಬ್ಬರು ಲಾಯರು ಇದ್ದಕ್ಕಿದ್ದ ಹಾಗೆ ವಾಂತಿ ಮಾಡಿದರು. ಅವರು ಓದುತ್ತಿದ್ದ ಪೇಪರಿನ ಹೆಸರೇನೆಂದು ನಮಗೆ ಗೊತ್ತಿದೆ. ಆದರೂ ಅದನ್ನು ನಾವು ಪ್ರಕಟಿಸಲು ಇಚ್ಛಿಸುವುದಿಲ್ಲ.

೧೨

ನೂರುಜನ ಏಟುಬಿದ್ದವರು ಒಟ್ಟಿಗೇ ಆಸ್ಪತ್ರೆಗೆ ನುಗ್ಗಿದರೆ ನೀವೇನುಮಾಡುತ್ತೀರಿ ಎಂದು ಆಸ್ಪತ್ರೆಯ ವೈದ್ಯನನ್ನು ಅಧಿಕಾರಿಗಳು ಕೇಳಿದಾಗ 'ಸ್ವಾಮಿ ನಾನು ಒಂದುದಿನ ರಜ ಪಡೆದು ಊರು ಬಿಟ್ಟುಹೋಗುತ್ತೇನೆ' ಎಂದು ಉತ್ತರ ಬಂದಿತಂತೆ.

೧೩

'ಭಾರತ ಸೈನ್ಯಕ್ಕೆ ೬೦,೦೦೦ ಕೈಗೋಲುಗಳು ಬೇಕು' ಎಂದು ಜಾಹೀರಾತನ್ನು ನೋಡಿದೆವು.

ಅಂದಮೇಲೆ ಇನ್ನುಮುಂದೆ ತುಫಾಕಿಗಳನ್ನು ಉಪಯೋಗಿಸುವುದಿಲ್ಲವೇನು?

# ಅತಿರಸ ನಿಮಿಷಗಳು

●

## ನಿಮಿಷ. ೧.

### ರ ಸ ನು ಸಿ – ಕೌ ಶಿ ಕ

[ಮುನ್ನುಡಿ. ಮುನ್ನುಡಿಯಿಲ್ಲದೆ ನಾನು ಲೇಖಮಾಲೆ ಬರೆಯುವ ಹವ್ಯಾಸ ಮಾಡಿಲ್ಲ. ಹಾಗಾಗಿ ಬರೆಯುತ್ತೇನೆ. ನನ್ನ ಜೀವನದಲ್ಲಾದ ಇಲ್ಲವೆ ಆಗ ಬಹುದಾದ ವಿಷಯುಗಳನ್ನು ಕುರಿತು ನಾನು ಬರೆಯುತ್ತಿದ್ದೇನೆಯೇ ಹೊರತು ಅಸಂಭಾವ್ಯ ವಿಷಯುಗಳನ್ನು ಕುರಿತು ಬರೆಯುತ್ತಲಿಲ್ಲ.]

ಇನ್ನು ಲೇಖಮಾಲೆಯ ಹೆಸರಿನ ವಿಷಯ ಅತಿರಸ ಎಂಬುದು ರೂಢಿಯಲ್ಲಿನ 'ಅತ್ರಾಸ' ಎಂಬ ತಿಂಡಿಯಲ್ಲ. ನಿಮಿಷ ಎಂಬುದು ಒಂದೇ ನಿಮಿಷವೂ ಅಲ್ಲ.

ಈ ಬರವಣಿಗೆಯಲ್ಲಿ ರಸವನ್ನು ಹುಡುಕಿ ಆಸ್ವಾದಿಸುವುದು ನಿಮ್ಮ ಕೆಲಸ. ಮೊದಲಿಗೆ ಸಾಹಿತಿಯು ರಸಾನುಭವವಿಲ್ಲದೆ ಬರೆಯುವ ಜೀವಿಯಲ್ಲವೆಂದೊಪ್ಪಿಕೊಂಡು, ನಿಮಗೆ ಅವನ ಬರಹದಲ್ಲಿ ರಸಾನುಭವವಾಗದೆ ಹೋದರೂ, ಅದು ನಿಮ್ಮ ಸಹೃದಯತಾ ಪಾಕ ಬೆಳೆದಿಲ್ಲವಾದುದರಿಂದ ಹಾಗಾಯಿತೆಂದು ತಿಳಿಯುವುದು.] .

ಹೇಳುವುದೇನೋ ನಿಮಿಷದ ಫಲ. ಅದರ ಸಂಘಟನೆಯಾಗಲು ತಗಲಿದ್ದು ಯುಗ. ಮಂಗಳೂರಿನಿಂದ ಬೆಳಗಿನ ಜಾವಕ್ಕೇನೆ ಮೋಟಾರು ಬಂಡಿಯಲ್ಲಿ ಕುಳಿತಿದ್ದೇವೆ – ಕಡೂರಾಭಿಮುಖವಾಗಿ ಹೊರಟ ನಾವು ಫಾಸಿಂಜರುಗಳು, ಮೂರು ತಾಸಿನ ಮೋಟರಿನ ಪ್ರಯಾಣ ವೇದನೆಯ ಫಲವಾಗಿ ನಮ್ಮ ಎಲುಬುಗಳೆಲ್ಲ ಶರೀರದ ತಳದಲ್ಲಿ ಕುಸಿದು ಬಿದ್ದಿದ್ದುವು. ಅಂಥ ಎರಡು ಮಾಂಸರಾಶಿಗಳನ್ನು ಎತ್ತಿಕೊಂಡು ಹೆಸರಾಂತ ಚಾರ್ಮಾಡಿ ಘುಟ್ಟವನ್ನು ನಮ್ಮ ಮೋಟರು ಏಗುತ್ತ ಏಗುತ್ತ ಏರಲಾರಂಭಿಸಿತು, ಆದಕ್ಕೆ ಚೋಕಿನ ತೊಡಕು. ಇತ್ತ ಮಿಸ್! ಪಾಯಿಂಗೆ ಬೇರೆ. ಇವೆರಡರ ಭರಸಾಲದೆಂದು ಡ್ರೈವರನು ಪ್ಲಾಯಿಂಗ್ ಫಾರ್ಟರ್ ರೆಸ್ಟ ತನ್ನ ಗಾಡಿಯೆಂದು, ಆಕ್ಸಿಸ್ ಪಕ್ಷವಹಿಸಿ ಉಪನ್ಯಾಸ ಮಾಡುತ್ತ ಓಡಿಸುವ ರಭಸ ಹೇಳತೀರದ್ದು, ಎಂಥ 'ಹೇರಪಿನ್ ಬೆಂಡ'ವೂ ಅವನಿಗೆ ನೇರಾಗಿ ಕಾಣುತ್ತಿತ್ತು. ಹಾದಿಯೆಲ್ಲ ಮಂಜು ಕವಿದಿದ್ದರೂ ಅವನಿಗೆ ಇದು ಮುಗಿಲಮರೆಯಲ್ಲಿ ವೈರಿಯನ್ನು ಬಾಂಬಿಸುತ್ತೇವೆಂಬ ಹೆಮ್ಮೆ. ಈ ಅವಸ್ಥೆಯಲ್ಲಿ ಬಂಡಿಯಲ್ಲಿ ಕೀಲುಕಳಚಿ ಬಿದ್ದ ನಮಗೆ "ಫಾಸಿಂಜರ"-ಎಂಬ ಮಾತಿನ ಅರ್ಥಾನುಭವವಾಯಿತು. ಫಾಸಿಸ್ಟ್ ಪಕ್ಷ ವಹಿಸಿದ ಡ್ರೈವರನ ಕೈಯಲ್ಲಿ 'ಫಾಸಿ'ಗೆ ಒಯಲ್ಪಡುವ ಜರ ಇಲ್ಲವವೆ ನರ! ಎಂದು.

## ನಿಮಿಷ ೨.

ನಮ್ಮ ಡ್ರೈವರ್—ವೈಮಾನಿಕನು ಘಟ್ಟದ ಗಡಿಯತನಕ ನಮ್ಮನ್ನು ಸಾಗಿಸುವ ಗಳಿಗೆಯವರೆಗೂ ಯಮನೊಡನೆ ಮುಖಾಮುಖಿ ಮಾತನಾಡುವ ಅತಿರಸಯೋಗ ಕಳೆದ ತರುವಾಯ ನಾವು ಶೀತಮಯ ವಾತಾವರಣದಲ್ಲಿ, ಮೈಗೆ ಹೊದ್ದಿಕೆ ಸಾಲದೆ ನಡುಗುತ್ತ ಮೂಡಿಗೆರೆಯನ್ನು ದಾಟಿ ಯಾರದೋ 'ಚಿಕ್ಕಮುಗಳ' 'ಊರನ್ನು' ಸೇರಿದೆವು. ಅಲ್ಲಿ ನಮ್ಮ ಹೊಟ್ಟೆಯ ಕಾವಲಿ ಕಾದಿತ್ತು. ಅದರ ಪ್ರಖರತೆಯನ್ನು ಶಾಂತಗೊಳಿಸಲು ಇನ್ನೂ ಬಾಂಬುಬೀಳದ ಯಾವದೊ ಊರಿನ 'ಆನಂದ ಭವನ'ವನ್ನು ಹೊಕ್ಕೆವು. ಅಲ್ಲಿ ಗಲ್ಲಿ ಮನೆಗಳಂತಿರುವ ಕಬ್ಬಿಣದ ಖುರ್ಚಿ, ಕಬ್ಬಿಣದ ಟಿಬಲ್‌ಗಳನ್ನೇರಿದುವು. ನಮಗೇನು ಬೇಕೆಂದು ಕೇಳುವ ಮೊದಲೇ ರಸಿಕರಂಜನೆಗಾಗಿ 'ಪಿಯಾ ಮಿಲನಕೋ ಜಾನ' ಗೀತದ ಬಿಲ್ಲೆಯನ್ನು ಇಟ್ಟರು.

ಆ ಗಾನಪ್ರಭಾವದಿಂದ ನಮ್ಮ ಬಂಡಿಯಲ್ಲಿ, ಜತೆಗಾತೀಯರಾಗಿ ಬಂದು, ಅಲ್ಲಿಗೂ ಬಂದಿದ್ದ ಓರ್ವ ಈರ್ವ ತರುಣಿಯರು, ನಾಚಿನುಗ್ಗಾಗಿ ಬಿಟ್ಟರು. ಅವರು ಮುಂಬಾಯಿಗಾಗಿ ಅದೇ ಕೆಲಸಕ್ಕಾಗಿ ಹೋಗುತ್ತಿದ್ದರೆಂದು ಈ ಹೋಟೇಲವರಿಗೆ ಹೇಗೆ ತಿಳಿಯಿತು ಎಂಬುದೇ ಅವರ ಲಜೆ|ಗೆಕಾರಣವಿರಬೇಕು.

ಮುಂದೆ ಬಂದುದು ತಪ್ಪದದೋಸೆ. ಅದರಲ್ಲಿ ತಪ್ಪಿದಭಾಗ ತುಪ್ಪವಾದರೂ, ತಪ್ಪದಭಾಗವು ಅಮೂಲ್ಯವಾದ ಹರಳೆಣ್ಣೆಯಿಂದ ಮಳರಂಜಿತವಾದ ವೆಜಿಟೆಬಲ್ ಘೀ. ಆ ದೋಸೆಯನ್ನು ನಮ್ಮ ಉದರಾಗ್ನಿಯ ಮೇಲೆ ಇರಿಸುತ್ತಿರುವಾಗ ನಮಗಾದ ಅತಿ ರಸಾನುಭಾವ, ಅನುಭವಿಸಿ 'ತೀರ'ಬೇಕಾದುದೇ. ಮುಂದೆ ರೈಲು ಗಾಡಿಯನೆರವು ಸಿಗುವ ತನಕ ನಮಗೆ ಪೆಟ್ರೋಲು ವಾಸನೆಯಾವುದೋ, ಗ್ಯಾಸ್ ಪರಿಮಳವಾವುದು? ಪ್ಯಾಸಿಂಜರ್ ಗ್ಯಾಸ್ ಯಾವುದು- ಒಂದೂ ಅನುಭವವಾಗದೆ ಹೋಯಿತು.

## ನಿಮಿಷ ೩.

ಇದು ಬೆಂಗಳೂರು X-ಪ್ರೆಸ್ ರೈಲು ಬಂಡಿಯಲ್ಲಿ ವೆಸ್ಟ್ ಕಾಸ್ಟ್ ಫಾಸಿಂಜರರಿಗಾಗಿ ಕಾದಿಟ್ಟ ಡಬ್ಬಿ! ಆ ಡಬ್ಬಿಯ ಬಾಯಿತೆರೆಯುವ ಮೊದಲೇ, ತಮಗೆ ತಾವೇ ಕಾಫಿನು ಪ್ರಮಾಣದ ಟ್ರಂಕುಗಳು ನೂರಾರು ಅದರ ಕಿಟಕಿಗಳಿಂದ ಒಳಗೆ ಸೇರಿದ್ದಾಯಿತು. ಆಮೇಲೆ ಮಕ್ಕಳನ್ನು ಅಲ್ಲಿಂದಲೇ ಒಳಕ್ಕೆ ತೂರಿದರು, ಕೆಲವರು ತಾವೇ ಆ ಮಾರ್ಗವಾಗಿ ಆಂಡನೇಯಿಸಿದರು. ನಾನೋ ಮೋಟರು ತಪ್ಪಿ ರೈಲು ಪರ್ಯಾಸುಖವಾದೀತು—ಎಂದು ಒಳಗೇರಿ ಹೋದರೆ-ಬಾಲ್ಯದಲ್ಲಿ ಕಲಿತ ಕುಸ್ತಿ, ಸಾಮುಗಳು ಸಾಲದೆ ತೀರಕೊನೆಯವನಾದೆ ಒಳಗೆ ಹೋಗಿ ನೊಡಿದೊಡೇನು ಫಲ,

ಹವೆಯೋ-ರೈಲು ನಮಗಾಗಿ ತಾನು ಬಿಸಿಲಲ್ಲಿ ಕಾದು ಕಾದು ಬಿಸಿಗೊಂಡಿತ್ತು. ಒಳಗೆ ಕಾಫಿನಾವುದು ಶರೀರವಾವುದು ಎಂಬ ಗಲಿಬಿಲಿ ಒಳಕ್ಕೆ ಸೇರಿದ ನರ,

ಟ್ರೆಂಕು, ಬೆಡಿಂಗ್‌ಗಳ ವ್ಯೂಹ. ಆಚೀಚೆ ರಾಶಿಬಿದ್ದ ಟ್ರೆಂಕುಗಳ ದೆಸೆಯಿಂದ ಮನುಷ್ಯರ ಟ್ರೆಂಕು ಮರೆಯಾಗಿ ಬರಿಯ ತಲೆಗಳ ಪೇಟ ಕಾಣಿಸುತ್ತಿದ್ದವು. ಅದರಲ್ಲೇ ನಿಂತುಕೊಂಡೆ; ನಿನ್ನೆಯ ನಿದ್ರೆ ನೆನವರಿಸಿಕ್ಕೊಂಡು ಜನರನ್ನು ನೋಡಲಾರದೆ, ಗಾಳಿಯನ್ನು ತಡೆಯಲಾರದೆ ರೈಲು ಡಬ್ಬಿಯ ಮೇಲಿನ ಅಗ್ರಲೇಖನಗಳನ್ನೇ ಓದತೊಡಗಿದೆ. ನನ್ನ ದುರ್ದೈವ—"ದೊಂಗಲುನ್ನಾರು ಜಾಗ್ರತ"—"Beware of pick pockets"—ಎಂಬ ದಿವ್ಯವಾಣಿಯೇ ನನಗೆ ಮೊದಲಿಗೆ ಕಾಣಿಸಿತು. ಕೂಡಲೆ ಕಿಸೆಯನ್ನು ಬಿಗಿಹಿಡಿದೆ. ಅತ್ತಿತ್ತ, ನೋಡಿದೆ. ನನ್ನನ್ನು ಬಿಟ್ಟು ಉಳಿದವರಲ್ಲಿ ಯಾರು ಕಿಸೆಗಳ್ಳರೆಂದು ಕತ್ತೆತ್ತಿ ನೋಡಿದೆ. ಉಳಿದವರೂ ತಮ್ಮ ತಮ್ಮ ಕಿಸೆಗಳನ್ನು ಹಿಡಿದು ಅದೇ ರೀತಿ ನನ್ನನ್ನು ಅನುಮಾನದಿಂದ ನೋಡುತ್ತಿದ್ದರು.

ಸೆಕೆಯೇ ಅತಿಯಾಗಿತ್ತು. ಗಾಳಿ ಶೂನ್ಯವಾಗಿತ್ತು. ಬಾಯಾರಿಕೆ ಮಿತಿಮೀರಿತ್ತು. ಆಗ ನನಗೆ ರೈಲಿನ ಪಾಸಿಂಜರಿಗೂ ಬಸ್ಸಿನ ಪಾಸಿಂಜರಿಗೂ ತಾರತಮ್ಯ ಸ್ಪಷ್ಟವಾಗಿ ಕಂಡಿತು, ಇಲ್ಲಿ ನಮ್ಮ ಪಾಡು ಫಾಸಿಗೇರಿಸಲ್ಪಡುವವನಿಗೆ ಆ ಮಾತೇ ತಿಳಿಯೇ ಜ್ವರವೇರುವಂತೆ ಕಂಡಿತು. ನಿಜ ನಾನು ಪಾಸಿಂಜರ, ನನಗೀಗ ಬಂದಿದೆ ಫಾಸಿಜ್ವರ—ಎನಿಸಿತು."

## ನಿಮಿಷ ೪.

X – ಪ್ರೆಸು ಹೀಗೆಯೇ ಸಾಗಿತು. ಹತ್ತಿಮಾರುವ ಹುಬ್ಬಳ್ಳಿಗೆ ಹೋಗಿ ಅದು ನಿಂತಿತು. ಆದರೆ ನಮ್ಮ ಡಬ್ಬಿಯ ಜ್ವರ ಇಳಿಯಲಿಲ್ಲ. ಎಲ್ಲರೂ 'ಥ್ರೂ ಥ್ರೂ'—ಎಂಬವರೇ.

ನಾನು ಮೆಲ್ಲಗೆ ಇಳಿದೆ. ಬಂಡಿ ಬದಲಿಸಿದೆ. ಇಂಟರರನ್ನೇರಿದೆ. ಅಲ್ಲಿನ ವಿರಾಮ; ಮೇಣದರಿವೆಯ ದಿವ್ಯ ಹಾಸುಗೆಗಾಗಿ ಮೋಹಿಸಿ ದಂಡತೆತ್ತು ಹೋಗಿ ನನ್ನ ಕುಟುಂಬ ಸಂಚಿ (Holdall) ಯನ್ನೇ ಅಲ್ಲಿ ಬಿಡಿಸಿದೆ,ಯಾರೂ ಇಲ್ಲ—ಆರಾಮುವಾಯಿತೆಂದು ಬ್ಲಾಕ್‌ಔಟು ಮಾಡಿ ಮಲಗಿದೆ. ಬಂಡಿ ಹೊರಟಿತು. ಹೊರಟ ಎರಡು ಕ್ಷಣಕ್ಕೇನೆ "ಅಮರಗೋಳು" ಎಂದು ನಿಲ್ದಾಣದ ಹೆಸರನ್ನು ಕೂಗಿದರು. ನಿಜ; ಆ ಮಾತು ನಿಜವಾಯಿತು. ಅತಿ ಸ್ಫೂರ್ತಿಯ ವಾಕ್ಯವದು. ಮರುದಿನ ಮನೆಯನ್ನುನಾನು ಸೇರುವ ತನಕ ಆ ಬ್ಲಾಕ್‌ಔಟನ್ನು ಬೇಧಿಸಿ ನನ್ನ ಕಿಸೆ, ಹಾಸಿಗೆಗಳನ್ನು ನುಗ್ಗಿ, ಕಚ್ಚಿದ ತಗಣಿಗಳ ದೆಸೆಯಿಂದ ಪಯಣಿಗನಾದ ನನ್ನ ಗೋಳು ಅಮರವಾಯಿತು! ಅದು ಯಾವ ಸ್ಟೇಷನಿನಲ್ಲಿ ತೊಡಗಿತೋ ಆ ದಿವ್ಯ ಕ್ಷೇತ್ರವನ್ನು "ಅಮರಗೋಳೆಂದ"ವರು ನಿಜವಾದ ಕನ್ನಡಿಗರು. ಎಷ್ಟೆಂದರೂ ಕುಮಾರವ್ಯಾಸನ ನೆರೆಯೂರವರಲ್ಲವೆ.

(ಹೀಗೆ ಬೇಕಾದರೆ ಮುಂದುವರಿಯುವುದು)

— **ಕಾರಂತ.**




ಮುಂದೆ ಶೌರ್ಯ ! ಹಿಂದೆ ಚೌರ್ಯ !

# ವಿವಾಹ ಮಹೋತ್ಸವ

## [ಎಸ್. ವೀ. ವೀ. ಕೃತಂ]

### ಪೀಠಿಕೆ

ನಾನು ಕೈ ಹಿಡಿದಾಗ ಅವಳಿಗೆ ಹನ್ನೊಂದು ವರ್ಷ ಐದು ತಿಂಗಳು. ಅದಕ್ಕೆ ಹಿಂದೆ ನಾನು ಅವಳನ್ನ ನೋಡಿರಲಿಲ್ಲ. ಆದರೂ ನನ್ನ ಮನಸ್ಸಿನಲ್ಲಿ ಏನೂ ಕಿರಿಕಿರಿ ಇರಲಿಲ್ಲ. ಆಗಿನ ಕಾಲದಲ್ಲಿ ನಾವು ಯಾರೂ ಸ್ವಯಂವಧು ಮಾಡಿಕೊಳ್ಳುತ್ತಿರಲಿಲ್ಲ. 'ಬಂದದ್ದೆಲ್ಲಾ ಬರಲಿ, ಗೋವಿಂದನ ದಯೆ ಒಂದಿರಲಿ' ಎಂದು ಸಿಕ್ಕಿದ್ದಷ್ಟರಲ್ಲೇ ತೃಪ್ತರಾಗಿದ್ದೆವು. ಈ ವಿಷಯದಲ್ಲಿ ಮಾತ್ರ ಏಕೆ ನಾವು ಅಸಮಾಧಾನಪಟ್ಟುಕೊಳ್ಳಬೇಕೆಂದು ನನಗೆ ಅರ್ಥವಾಗುವುದಿಲ್ಲ. ನಮ್ಮ ಬಂಧುಗಳನ್ನು ನಾವೇ ಆರಿಸಿ ಅನುಮೋದಿಸುತ್ತೇವೆಯೇ? ತಂದೆ ತಾಯಿಗಳು, ಅಣ್ಣತಮ್ಮಂದಿರು, ದೊಡ್ಡಪ್ಪ, ಚಿಕ್ಕಪ್ಪ, ಸೋದರತ್ತೆ, ಸೋದರಮಾವ, ಅಕ್ಕತಂಗಿಯರು—ಇವರಲ್ಲೊಬ್ಬರನ್ನಾದರೂ ಚುನಾಯಿಸಲು ನಮಗೆ ಅಧಿಕಾರವಿದೆಯೇ? ಸ್ವಾತಂತ್ರ್ಯವಿದೆಯೇ? ನಮ್ಮ ಸಮ್ಮತಿಯನ್ನು ಕೇಳದೆ ನಮ್ಮ ಅಭಿಲಾಷೆಯನ್ನು ವಿಚಾರಿಸದೆ ಅವರೆಲ್ಲರೂ ಹೇಗೋ, ಎಲ್ಲಿಂದಲೋ, ವಕ್ರಿಸಿಬಿಡುತ್ತಿರುವರು. ವಿಧಿವಿಲಾಸ ಎಂದು ನಾವೂ ಸುಮ್ಮನಿದ್ದುಬಿಡುತ್ತೇವೆ. ಅವರನ್ನ ಕೊಂಚಕೊಂಚವಾಗಿ ಪ್ರೀತಿಸಲು ಕಲಿಯುತ್ತೇವೆ. ತಂಗಿಗೊಂದು ಮಗುವಾದರೆ ನಾವು ಅಂದೇ ಅದರ ಸೋದರಮಾವನಾದೆವು. ಸರಿ! ಎಲ್ಲರೂ ನಿರೀಕ್ಷಿಸುವಂತೆ ನಾವೂ ಅದನ್ನು ಮುದ್ದಿಸಲು ಮೊದಲು ಮಾಡುತ್ತೇವೆ. ಕೆಲವು ದಿನಗಳಲ್ಲಿ ಆ ಮಗುವೂ ಕೂಡ ನಮ್ಮ ತಲೆಯಮೇಲೆ ಕೂತುಬಿಡುತ್ತದೆ. ಆ ಮೇಲೆ ಅದನ್ನಿಳಿಸಲು ಯಾರಿಂದಲೂ ಸಾಧ್ಯವಿಲ್ಲ.

ಬಂಧುಗಳಲ್ಲದವರನ್ನೂ ಕೂಡ ನಾವೇ ಸ್ವತಃ ಆರಿಸುತ್ತೇವೆಯೇ? ಇಲ್ಲ. ನನ್ನ ಸ್ನೇಹಿತರು ಯಾರು ಯಾರು? ಎದುರುಮನೆ ರಾಮರಾಯರ ಮಗ ಸೋಮು, ನನ್ನ ಜೊತೆ ಕಾಲೇಜಿಲ್ಲೋದಿದ ಕೇಶು—ಇವರಿಬ್ಬರೂ. ಇವರು ಹೇಗೋ ನನ್ನ ಜೀವನದ ಚಕ್ರಕ್ಕೆ ಸಿಲುಕಿಕೊಂಡು ಇನ್ನೂ ನನ್ನೊಂದಿಗೆ ಗೆಳೆಯರಂತೆ ಇದಾರೆ. ಆದರೆ ನಾನು ಬೇರೊಂದು ಶಾಲೆಯಲ್ಲಿ ಓದಿದ್ದರೆ, ಇನ್ನೊಂದು ಬೀದಿಯಲ್ಲಿ ವಾಸವಾ

ಗಿದ್ದರೆ ಸೋಮು ಕೇಶು ಸಹವಾಸ ಸಿಗುತ್ತಲೇ ಇರಲಿಲ್ಲ. ಅವರನ್ನ ನಾನೇ ಹುಡುಕಿ ತರುವುದೆಂದರೆ ಆಗದ ಮಾತು.

ಹಾಗೆಯೇ 'ನಿನಗೆ ಬೇಕಾದ ಮೇಷ್ಟರನ್ನು ನೀನು ಆರಿಸಿಕೊ' ಎಂದು ತಂದೆ ತಾಯಿಗಳು ಸ್ವಾತಂತ್ರ್ಯ ಕೊಟ್ಟಿದ್ದರೆ ಎಂದಿಗೂ ನಾನು ಅಪ್ಪುರಾಯರನ್ನ ಚುನಾಯಿಸುತ್ತಿರಲಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ನಾನು ಅವರನ್ನು ಸ್ವೀಕರಿಸಿದೆ. ಮುದುಕರು; ಬೋಳುತಲೆ; ನರೆತು ಸೊಂಪಾಗಿ ಬೆಳೆದ ಮೀಸೆ; ಸುಕ್ಕುಬಿದ್ದ ಮೋರೆ. ಮೂವತ್ತೈದು ವರ್ಷದ ಉಪಾಧ್ಯಾಯಗಾರಿಕೆಯಿಂದ ಅವರು ಒಂದು ಪಾಠವನ್ನು ಕಲಿತಿದ್ದರು—ಹೊಡೆದು ಹೊಡೆದು ಹಣ್ಣುಮಾಡಿದ ಹೊರತು ಮಕ್ಕಳು ಸರಸ್ವತೀ ದೇವಿಯ ಅನುಗ್ರಹಕ್ಕೆ ಪಾತ್ರರಾಗುವುದಿಲ್ಲವೆಂದು! ಇದಕ್ಕಾಗಿ ಊರಿನ ದೊಡ್ಡವರೆಲ್ಲರೂ ಅವರನ್ನು ಕೊಂಡಾಡುತ್ತಿದ್ದರು. ಚಿಕ್ಕಂದಿನಲ್ಲಿ ತಮಗಾದ ನೋವು ಈಗ ತಮ್ಮ ಮಕ್ಕಳಿಗೂ ತಗುಲಲಿ ಎಂಬುದು ಅವರ ಅಭಿಮತ. ಅವರ ಬೆತ್ತದ ಸವಿಯನ್ನರಿಯದವರು ಆ ಊರಲ್ಲೇ ಇರಲಿಲ್ಲ. ನಾವು ಹುಡುಗರು ಒಂದು ಸಾರಿ ಅವರನ್ನ ಸಾಯಿಸಿಬಿಡಬೇಕೆಂದು ಏನೇನೋ ಮಂತ್ರ ಕಲಿತು ಕತ್ತಲಲ್ಲಿ ಹಾಳುಗುಡಿಯಲ್ಲಿ ಕುಳಿತು ಜಪಿಸಿದೆವು. ಮಂತ್ರಗಳ ಮೇಲೆ ನಮಗಿದ್ದ ಭಕ್ತಿ ಮಾಯವಾಯಿತು. ಅವರ ಬೆತ್ತಕ್ಕೆ ಸಿಂಬಳ ಹಚ್ಚಿದೆವು. ಏಕೆಂದರೆ, ಹಾಗೆ ಮಾಡಿದರೆ ಅದು ಚೂರು ಚೂರಾಗುವುದೆಂದು ಯಾವನೋ ಒಬ್ಬ ನೆರೆಹಳ್ಳಿ ಹುಡುಗ ಉಪದೇಶಮಾಡಿದ್ದ. ಸಿಂಬಳದ ಮೇಲೆ ನಮಗಿದ್ದ ನಂಬಿಕೆಯೂ ಮಾಯವಾಯಿತು. ಪಾಪ, ಅಪ್ಪುರಾಯರು ಈಗ ಈ ಲೋಕದಲ್ಲಿಲ್ಲ. ಅವರನ್ನ ಅವಹೇಳನ ಮಾಡಲು ಇದು ಸಮಯವಲ್ಲ. ಅವರ ತಾಪತ್ರಯಗಳು, ಅವರು ಬೆಳೆದ ಸನ್ನಿವೇಶ ಇವುಗಳನ್ನು ನೆನೆದರೆ ಅವರನ್ನ ಯಾರೂ ದೂಷಿಸುವ ಹಾಗಿಲ್ಲ. ಆದರೂ, ಏಕೆ ಪ್ರಸ್ತಾಪ ಮಾಡಿದೆ ಅಂದರೆ, ನನ್ನ ಕೋರಿಕೆ ಇಲ್ಲದೆಯೇ ಅನೇಕರು ನನ್ನ ಜೀವಕ್ಕಂಟಿಕೊಂಡಿದಾರೆ; ಕಾಲಾನುಕಾಲಕ್ಕೆ ಅವರೂ ನಾನೂ ಹೇಗೋ ಹೊಂದಿಕೊಂಡಿದೇವೆ. ಹೀಗಿರುವಾಗ ಹೆಂಡತಿ ವಿಷಯದಲ್ಲಿ ಮಾತ್ರ ನಾನು ಏಕೆ ಮೊಂಡಾಟಬೇಕು?

ಕೇವಲ ಒಲುಮೆಯ ಕುಲುಮೆಯಲ್ಲೇ ಮಾಡುವ ಪ್ರೇಮವಿವಾಹ ಮಾಡಿಕೊಳ್ಳಬೇಕೆಂದು ನಾನು ಒಂದೆರಡು ಸಾರಿ ಪ್ರಯತ್ನಿಸಿದೆ ನನ್ನ ಜೀವಮಾನದಲ್ಲಿ ಮೊತ್ತಮೊದಲು ಒಲುಮೆ ಉಕ್ಕಿ ಬಂದದ್ದು ನನಗೆ ಆರು ವರ್ಷಗಳಾಗಿದ್ದಾಗ! ಪಕ್ಕದಮನೆ ಪದ್ಮನನ್ನು ಮದುವೆಮಾಡಿಕೊಂಡು ಬಿಡಬೇಕೆಂದು ಆಗ ನನಗೆ ಹುಚ್ಚುಹಿಡಿಯಿತು. ಒಂದುದಿನ ಅವಳು ಒಂದು ಸಣ್ಣಬುಟ್ಟಿ ತುಂಬ ಕಡಲೆಕಾಯಿ ತೆಗೆದುಕೊಂಡು ನನ್ನಮನೆ ಹಜಾರದಲ್ಲಿ ಕುಳಿತಳು. ಅವಳಿಗೆ ನಾಲ್ಕು ವರ್ಷ ವಯಸ್ಸು. ಹಸುರು ಲಂಗ, ಹಳದಿ ಜಾಕೆಟ್ಟು, ಚಿನ್ನದ ಸರ, ಮೂರು ಮೂರು ಬಳೆ, ಅಗಲವಾದ ಕಣ್ಣುಗಳು, ಕಾಡಿಗೆ, ನೆಟ್ಟ ಬೈತಲೆ—ನನಗೆ ಮತ್ತೇರಿತು. "ಇನ್ನೂ ಕೊಂಚ ಕೊಡೆ" ಅಂತ ಅಂಗಲಾಚಿದೆ. ಅವಳು, "ನೀನು ಯಾರ ಸುಬ್ಬಿ

ಹೇಳು" ಅಂದಳು. "ನಿನ್ನ ಸುಬ್ಬು! ಪದ್ಮನ ಸುಬ್ಬು! ನಮ್ಮ ಮನೆಯಲ್ಲಿ ಏನಾದರೂ ತಿಂಡಿ ಮಾಡಿದರೆ ನಿನಗೆ ತಂದುಕೊಡುತ್ತೇನೆ. ಬೇರೆ ಯಾರಿಗೂ ಒಂದು ಚೂರು ಕೂಡ ಕೊಡುವುದಿಲ್ಲ" ಅಂದೆ. ಏಣಿ ಮೆಟ್ಟಲಿನ ಕೆಳಗೆ ಇಬ್ಬರೂ ಗುಟ್ಟಾಗಿ ಕೂತುಕೊಂಡು ಕಡಲೆಕಾಯನ್ನೆಲ್ಲಾ ಮುಗಿಸಿದೆವು. ಅವಳೇ ನನಗೆ ಎಲ್ಲವನ್ನೂ ಬಿಡಿಸಿಕೊಟ್ಟಳು. ಆ ಮೇಲೆ ನಾವು 'ಮನೆ ಆಟ' ಆಡಿದೆವು. ಮನೆಗೆ ಓಡಿ ಹೋಗಿ ಅವಳು ಒಂದು ಆಟದ ಒಲೆ, ಬಣ್ಣದ ಭಾವಿ, ಹಗ್ಗ, ಕೊಡ, ತಪ್ಪಲೆ, ಬಾಣಲಿ, ಲಟ್ಟಣಿಗೆ ಎಲ್ಲಾ ತಂದಳು. "ನೀನು ಕೋರ್ಟಿಗೆ ಹೋಗಿ ಕಾಸು ತಗೆದುಕೊಂಡು ಬಾ; ಕೈ ತುಂಬಾ ತರಬೇಕು" ಎಂದು ನನ್ನನ್ನ ಓಡಿಸಿದಳು. ಅವಳ ತಂದೆ ಲಾಯರು; ತಿಂಗಳಿಗೆ ೨೦೦, ೩೦೦ ವರಮಾನ. "ಕೋರ್ಟಿಂದ ಬರುವಾಗ ಒಂದು ಜೊಂಪೆ ಹೂ ತರಬೇಕು" ಎಂದು ಕೂಗಿದಳು. 'ನಿಜವಾದ ಹೂವಿಗೆ ನಾನೆಲ್ಲಿಗೆ ಹೋಗಲಿ' ಅಂದಾಗ, 'ಅಯ್ಯೋ! ಬೆಪ್ಪ! ಆಕಡೆ ಮೂಲೇನೇ ಕೋರ್ಟು! ಅಲ್ಲಿಂದ ಬರುವಾಗ, ಗೇಟುಹತ್ತಿರ ಹೋಗಿ ಒಂದಿಷ್ಟು ಹುಲ್ಲುಕಿತ್ತು ತಾ!' ಎಂದು ಬೈದು ಕಳುಹಿಸಿದಳು. ಅವಳ ಹತ್ತಿರ ಕೊಂಚ ಖಾರದ ಅವಲಕ್ಕಿ ಇತ್ತು. "ನಾನು ಬರುವುದರೊಳಗೆ ಅವಲಕ್ಕಿಯನ್ನೆಲ್ಲಾ ತಿಂದು ಮುಗಿಸಬಾರದು ನೀನು" ಎಂದು ಹೇಳಿ ನನ್ನ ಪಾಲನ್ನು ಭದ್ರಪಡಿಸಿದೆ. "ನೋಡು, ಪದ್ಮ! ನಾನು ನಿನ್ನ ಗಂಡ, ನೀನು ನನ್ನ ಹೆಂಡತಿ, ಗಂಡ ಊಟ ಮಾಡಿದಮೇಲೆ ಹೆಂಡತಿ ಊಟ ಮಾಡಬೇಕು, ಗೊತ್ತಾಯಿತೆ?" ಅಂದೆ. 'ಹುಂ' ಅಂದಳು.

ಖಾರದ ಅವಲಕ್ಕಿಯನ್ನೇ ನೆನೆಯುತ್ತಾ ನನಗೆ ಕೋರ್ಟಿನಲ್ಲಿ ನಿಲ್ಲಲು ಮನ ಬರಲಿಲ್ಲ. ಐವತ್ತು ಎಣಿಸುವುದರೊಳಗಾಗಿ ನಾನು ಪದ್ಮನ ಹತ್ತಿರಕ್ಕೆ ಓಡಿಬಂದು ಬಿಟ್ಟೆ. ಹೀಗೆ, ಒಂದೊಂದು ದಿನ ಒಂದೊಂದು ಆಹಾರ ಪದಾರ್ಥದ ಆಧಾರದ ಮೇಲೆ ನಮ್ಮಿಬ್ಬರ ಪ್ರೇಮ ಬಲಿಯಿತು. ಒಂದುದಿನ ನಾನು ಧೈರ್ಯದಿಂದ, 'ಲೇ! ಪದ್ಮ! ನನ್ನನ್ನ ಮದುವೆ ಮಾಡಿಕೊಳ್ಳುತ್ತೀಯೇನೆ?' ಅಂತ ಕೇಳೇಬಿಟ್ಟೆ. 'ಆಗಲೇ ನಾವು ಗಂಡ ಹೆಂಡತಿ ತಾನೆ' ಅಂದಳವಳು. "ಹಾಗಲ್ಲ! ಆಟ ಆಡು ವಾಗ ಮಾತ್ರ ಅಲ್ಲ; ಯಾವಾಗಲೂ; ನಿಜವಾಗಿಯೂ" ಅಂದೆ. ಅವಳು ಮೃದು ಮಧುರವಾಣಿಯಿಂದ 'ಹುಂ' ಅಂದಳು. ಈ ಸಮಾಚಾರವನ್ನು ನಾವಿಬ್ಬರೂ ನಮ್ಮ ತಾಯಿ ತಂದೆಯರಿಗೆ ತಿಳಿಸಲೇ ಇಲ್ಲ. ಒಂದುದಿನ ನಾನು ಮನೆಗೆ ಬರುವಾಗ ಪದ್ಮ ಎದುರುಮನೆ ಗೋಪು ಸಂಗಡ ಜಿಲೇಬಿ ಚೂರು ತಿನ್ನುತ್ತಾ 'ಮನೆ ಆಟ' ಆಡುತ್ತಿದ್ದಳು. ನನಗೆ ರೇಗಿತು. 'ಊಟ'ಕ್ಕೆ ಅವಲಕ್ಕಿ ಇದ್ದಾಗ ನಾನು 'ಗಂಡ'; ಜಿಲೇಬಿ ಇದ್ದಾಗ ಗೋಪು 'ಗಂಡ'ನೋ? ಎಲಾ ಚಂಚಲೇ! ಎಲವೋ ಧೂರ್ತಾ— ಅಂತ ನೆಟ್ಟಗೆ ಅವರ ಕಡೆ ನುಗ್ಗಿ ಅವರ ಒಲೆ ಬಾಣಲಿ ಎಲ್ಲಾನೂ ತುಳಿದು ಪದ್ಮನ ಕೆನ್ನೆಗೆ ಕೆಂಪಗೆ ಒಂದು ಏಟು ಬಿಟ್ಟೆ. ಆಮೇಲೆ ಮನೆಗೆಹೋಗಿ ಅಳುತ್ತಾ ಕೂತೆ.

ಒಂದೆರಡು ತಿಂಗಳಲ್ಲೇ ನನ್ನ ಪ್ರೇಮಕ್ಕೆ ಬೇರೆ ಆಸ್ಪದ ಸಿಕ್ಕಿತು. ನಾವಿದ್ದ ಬೀದಿಯಲ್ಲೇ ಒಬ್ಬರು ರಿಟೈರ್ಡ್ ಎಕ್ಸೈಸ್ ಇನ್ಸ್‌ಪೆಕ್ಟರಿದ್ದರು. ಅವರಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವರ ಹೆಂಡತಿಗೆ ನನ್ನನ್ನ ಕಂಡರೆ ತುಂಬಾ ಪ್ರೀತಿ. ಮನೆಯಲ್ಲೇನಾದರೂ ಹೆಚ್ಚು ಅಡಿಗೆಯಾದರೆ ನನ್ನನ್ನೂ ಊಟಕ್ಕೆ ಕರೆಯುವರು; ಮೂರು ಸಂಡಿಗೆ ಕರಿದರೆ, ಒಂದು ನನ್ನ ಪಾಲಿಗೆ ಬರುತ್ತಿತ್ತು; ಮಂಡಿಗೆ ಮಾಡಿದರಂತೂ ನಾನು ತಿಂದುಳಿದದ್ದೇ ಅವರಿಬ್ಬರಿಗೆ. ಆಕೆ ನನ್ನನ್ನ ಚಿಲ್ಲರೆ ಕೆಲಸಗಳ ಮೇಲೆ ಅಂಗಡಿಗೆ ಪೋಸ್ಟ್ ಆಫೀಸಿಗೆ ಅಂತ ಓಡಿಸುತ್ತಿದ್ದಳು. ಒಂದುದಿನ ಆಕೆ ನನ್ನನ್ನ ಬಿಗಿದಪ್ಪಿಕೊಂಡು ಮುದ್ದಿಡುವಾಗ ನಾನು, "ಮಾಮಿ! ನನ್ನನ್ನ ಮದುವೆ ಮಾಡಿಕೊಳ್ಳುತ್ತೀಯಾ, ಮಾಮಿ!" ಅಂತೆ ಕೇಳೇಬಿಟ್ಟೆ! ಆಕೆ ದಿಗ್ಭ್ರಾಂತಳಾಗಿರಬೇಕು. ನಕ್ಕುನಕ್ಕು ನೆಲದಮೇಲೆ ಬಿದ್ದು ಹೊರಳಾಡಿದಳು. ತನ್ನ ಗಂಡನನ್ನು ಕರೆದು ಅವರಿಗೂ ಈ ಸಮಾಚಾರವನ್ನು ತಿಳಿಸಿಬಿಟ್ಟಳು. "ಐವತ್ತು ವರ್ಷ ವಯಸ್ಸಾಯಿತಲ್ಲಾ ಈಕೆಗೆ; ನಮ್ಮಿಬ್ಬರ ಪ್ರೀತಿ ಪ್ರೇಮಗಳನ್ನು ಯಾರಿಗೂ ತಿಳಿಸದೆ ಗೋಪ್ಯವಾಗಿಟ್ಟಿರುತ್ತಾಳೆ" ಎಂದು ನಂಬಿದ್ದ ನನಗೆ ಇದರಿಂದ ತುಂಬಾ ರೇಗಿತು. ಮೆಲ್ಲಗೆ ಆ ಮನೆಯಿಂದ ನುಸುಳಿದೆ; ಮತ್ತೆ ಆ ಹೊಸಲು ದಾಟಲ್ಲ.

ಆ ಮೇಲೆ ಲೋವರ್‌ಸೆಕಂಡರಿಯಾಗಿ ಇ.ಸಿ.ಪಿ.ಎಸ್. ಆಗಿ ಕಾಲೇಜು ಸೇರಿದೆ. ಹುಡುಗರೆಲ್ಲರೂ ರೈನಾಲ್ಡ್ಸ್‌ರ ಕಾದಂಬರಿಗಳನ್ನು ಕತ್ತಲಲ್ಲೇ ಕುಳಿತು ಓದುವ ಪ್ರಾಯ ಅದು. ಕಾಲೇಜಲ್ಲೋದುತ್ತಿದ್ದ ಅನೇಕ ವಿದ್ಯಾರ್ಥಿನಿಯರನ್ನು ನನ್ನ ಮನ ಒಲಿಯಿತು. ಆಂಗ್ಲೋ ಇಂಡಿಯನ್ ಒಬ್ಬರು, ಪಾರ್ಸಿ ಒಬ್ಬರು ಹೀಗಾಗಿ ಕಡೆಗೆ ನನ್ನ ಸಂಪೂರ್ಣ ಹೃದಯ ಹೋಗಿ ಕಮಲಳ ಪಾದಕಮಲಗಳಲ್ಲಿ ನೆಲೆಸಿತು. ಆಕೆ ನಮ್ಮ ಜನ. ಇತರ ವಿಧವಾದ ತೊಂದರೆಗಳಿಲ್ಲ. ಅವಳ ತಂದೆ ಒಂದು ಔಷಧಿ ಅಂಗಡಿ ಇಟ್ಟಿದ್ದರು. ಅವಳ ಅಣ್ಣ ನನ್ನ ಸಹಪಾಠಿಯಾದ್ದರಿಂದ ನನಗೆ ಆ ದೇವಕನ್ಯೆಯ ಪರಿಚಯಲಾಭ ದೊರೆಯಿತು.

ಒಂದು ದಿನ ನಾನು ನನ್ನ ತಂದೆಗೆ ಕಮಲೆಯನ್ನಲ್ಲದೆ ಬೇರೆ ಯಾರನ್ನೂ ನಾನು ಮದುವೆ ಮಾಡಿಕೊಳ್ಳುವುದಿಲ್ಲವೆಂದೂ ಅವರು ಬೇರೆ ಏರ್ಪಾಟು ಮಾಡಬೇಕಾಗಿಲ್ಲವೆಂದೂ ಹಾಗೆ ಮಾಡಿದರೆ ಆಗುವ ಅಪಮಾನಕ್ಕೆ ನಾನು ಹೊಣೆಗಾರನಾಗುವುದಿಲ್ಲವೆಂದೂ ಕಾಗದ ಬರೆದೆ.

ನಮ್ಮ ತಂದೆ ಬುದ್ಧಿವಂತರು. ನನಗೆ ಏನಾಗಿತ್ತೆಂದು ಅವರಿಗೆ ಗೊತ್ತಿತ್ತು. "ಆಗಲಿ! ಆ ಹುಡುಗಿಯನ್ನೇ ತೀರ್ಮಾನ ಮಾಡೋಣ. ಈಗ ಕಟಾವಿನ ಕಾಲ. ಮುಗಿಸಿಕೊಂಡು ಬರುವ ತಿಂಗಳು ಬರುತ್ತೇನೆ" ಎಂದು ಉತ್ತರ ಬರೆದರು. ಅಷ್ಟರೊಳಗೆ ಕಮಲಳಿಗೆ ಮದುವೆ ಆಗಿ ಹೋಗಿತ್ತು.

ಕಲ್ಯಾಣಿಯನ್ನ ಗೊತ್ತುಮಾಡಿದ್ದು ನಮ್ಮ ತಂದೆಯವರು.

—**ನಾ. ಕ.**

[ಬರುವ ತಿಂಗಳಿನ ಕೊರವಂಜಿಯಲ್ಲಿ : ಕಲ್ಯಾಣಿಯ ತಂದೆ.]

# 'ಸೋಮು ನಾಣಿ ಸರಸ'

ಸೋಮು. ನಾಣಿ ಇಬ್ಬರೂ ನನಗೆ ಎಳೆತನದಿಂದ ಸ್ನೇಹಿತರು. ನಾವು ಮೂರು ಜನವೂ ಮೊದಲಿಂದಲೂ ತ್ರಿಮೂರ್ತಿಗಳಂತೆ ಬೆಳೆದು ಬಂದಿದ್ದೆವು. ಸೋಮು ಮನೆಯಿಂದ ಏನಾದರೂ ತಿಂಡಿಯನ್ನು ಸೃಷ್ಟಿಸಿಕೊಂಡು ತರುವನು. ನಾಣಿ ಅದನ್ನು ಉಪಾಯದಿಂದ ಅವನ ಜತೆಯಲ್ಲೇ ರಕ್ಷಿಸಿಕೊಂಡು ಬರುವನು. ನಾನು ಅವರುಗಳ ಸಹಾಯದಿಂದ ಲಯ ಕಾರ್ಯವನ್ನು ಮಾಡುತ್ತಿದ್ದೆ. ಸೋಮು ತಾಯಿಗೆ ಸೋಮು ಒಬ್ಬನೇ ಗಂಡುಮಗ. ಹಾಗಾಗಿ ಅವನು ಕೇಳಿದ ತಿಂಡಿಯನ್ನು ಆಕೆ ಮಾಡಿಯೋ ತರಸಿಯೋ ಕೊಡುತ್ತಿದ್ದಳು. ನಾಣಿ ನಾನು ಎಂಟು ಗಂಡುಮಕ್ಕಳ ಜತೆಯಲ್ಲಿ ಹುಟ್ಟಿದವರು. ಅಣ್ಣನ ಪಂಚೆ ಹರಿದರೆ ನಮ್ಮ ಪಂಚೆ, ದೊಡ್ಡಣ್ಣನ ಅಂಗಿ ಸಣ್ಣದು ಮಾಡಿದರೆ ನಮಗೆ ಹೊಸ ಅಂಗಿ, ಅಪ್ಪನ ಚಡ್ಡಿ ವ್ಯತ್ಯಾಸ ಮಾಡಿದರೆ ನಮಗೆ ಷರಾಯಿ, ಇದೇ ಹೊಸ ಬಟ್ಟೆಗಳು ನಮಗೆ. ಹೀಗಿರುವಾಗ ತಿಂಡಿ ಸೊಗಸೆಲ್ಲಾ ಸೋಮು ಸ್ನೇಹದಿಂದಲೇ. ಆದಕಾರಣದಿಂದಲೇ ಸೋಮು ಸ್ನೇಹವನ್ನು ಬಲು ಉಪಾಯವಾಗಿ ಬೆಳೆಸಿಕೊಂಡು ಬಂದಿದ್ದೆವು.

ಹೀಗಿರುವಾಗ ಒಂದು ಸಂಘಟನೆ ನಡೆದುಹೋಯಿತು. ಆಕಾರಣದಿಂದ ನಾಣಿ ಸೋಮು ಸ್ನೇಹ ತೊಡೆದುಹೋಯಿತು. ಆ ಸಂಘಟನೆಯನ್ನೇ ಹೇಳ ಹೊರಟಿದ್ದೆ.

ನಾಣಿ ಮೊದಲೇ ಹೇಳಿದಂತೆ ಎಂಟು ಜನ ಅಣ್ಣತಮ್ಮಂದಿರಲ್ಲಿ ಆರನೆಯವನು. ಸೋಮು ಒಬ್ಬನೇ ಒಬ್ಬ ಗಂಡುಮಗ. ಆದರೂ ಜಗನ್ನಿಯಾಮಕನು ಈ ವ್ಯತ್ಯಾಸವನ್ನು ಹೋಗಲಾಡಿಸಲೋಸುಗ ಸೋಮುವಿಗೆ ಆರುಸಾಲು ಹಲ್ಲು ಕೊಟ್ಟಿದ್ದನು. ಆರು ಜನದ ಚೇಷ್ಟೆ ಕೊಟ್ಟಿದ್ದನು. ಆರು ಜನರ ಕುಹಕ ಹುದುಗಿಸಿಟ್ಟಿದ್ದನು.

ಒಬ್ಬನೇ ಗಂಡುಮಗನ ಮುದ್ದು—ಹುಟ್ಟು ಕುಹಕ ಚೇಷ್ಟೆ ಇವೆರಡು ಗುಣಗಳೂ ಸೋಮುವಿನಲ್ಲಿ ಮೂರ್ತಿಮತ್ತಾಗಿ ಎಷ್ಟೋವೇಳೆ ಎಷ್ಟೋಜನ ಸ್ನೇಹಿತರಿಗೆ ವಿಪರೀತ ಆಭಾಸವನ್ನುಂಟುಮಾಡುತ್ತಿತ್ತು. ಕಡೆಗೆ ಎಳೆತನದ ಗೆಳೆಯ ನಾಣಿಗೂ ಇದು ತಪ್ಪಲಿಲ್ಲ. ಅದನ್ನೇ ಹೇಳಹೊರಟವನು ಏನೇನೊ ಹೇಳುತ್ತಿದ್ದೇನೆ ಕ್ಷಮಿಸಿ.

ಈ ಸಂಘಟನೆಯು ನಡೆಯುವ ವೇಳೆಗೆ ನಾಣಿಯು ಇಂಜಿನಿಯರಿಂಗ್ ಕಾಲೇಜಿನಲ್ಲಿ ಓದುತ್ತಿದ್ದ. ಸೋಮು ಇಂಟರಿನಲ್ಲೇ ಡುಮ್ಕಿ ಹೊಡೆದೂ ಹೊಡೆದೂ ಕಡೆಗೆ ಸೆನ್ಸಸ್ ಕಛೇರಿಯಲ್ಲಿ ನೌಕರನಾಗಿ ಸೇರಿಕೊಂಡ—ಇತರ ಬ್ರಾಹ್ಮಣ

ಯುವಕರಂತೆ—. ಇದು ಹರಾಮಿ ಕೆಲಸವಾದರೂ ಬೇರೆ ಕೆಲಸವಿಲ್ಲದ ಕಾರಣ ಈ ಕೆಲಸಕ್ಕೆ ಸೇರಿಕೊಂಡಿದ್ದ. ಒಂದು ದಿನ ಏನೇನೋ ಮಾತು ಬಂದು ನಾಣಿ ಸೋಮುವನ್ನು ತುಂಬಾ ಪರಿಹಾಸ್ಯ ಮಾಡಿದ. ಅವನ ಹಲ್ಲುಗಳ ಆರ್ಸಾಲುಗಳನ್ನು ನೋಡಿ ತನ್ನ ಹಲ್ಲು ಹಲ್ಲು ಕಿರಿದ. ಅವನ ಸೆನ್ಸಸ್ ಆಫೀಸಿನ ಕೆಲಸವನ್ನು ಕತ್ತೆ ಕೆಲಸಕ್ಕೆ ಹೋಲಿಸಿದ. ಅವನ ಧ್ವನಿಯು, ಅವನ ಕಂಠವೂ, ಅವನ ಕೆಲಸಕ್ಕೆ ಸರಿಯಾದುದೆಂದು ಹೀಯಾಳಿಸಿದ. ಅವತ್ತೇನು ಬಂದಿತ್ತೊ ಸೋಮುವಿಗೆ. ಸುಮ್ಮನೆ ಇದ್ದ. ಹೇಳಿದ್ದೆಲ್ಲಾ ಕೇಳಿಕೊಂಡು ಕಿಮಕ್ಕಮಕ್ಕನ್ನದೆ ಕಡೆಗೆ ರೇಗದೆ ಕೂಡ ಕುಳಿತಿದ್ದ. ನಾಣಿಗೆ ಬೇಜಾರಾಯಿತು ಅವನೇ ಮಾತು ನಿಲ್ಲಿಸಿದ. ಕಡೆಗೆ ನಾನು ಇವರಿಬ್ಬರ 'ಸರಸ'ವನ್ನು ನೋಡಲಾರದೆ, "ಬನ್ನಿರೊ ಅಯ್ಯಂಗಾರ್ ಹೋಟಲಿನಲ್ಲಿ ಇವತ್ತು ಉದ್ದಿನವಡೆ ಬಲು ಚೆನ್ನು" ಎಂದು ಇಬ್ಬರನ್ನೂ ಕರೆದುಕೊಂಡುಹೋಗಿ ತಿಂಡಿಕೊಡಿಸಿದೆ.

ಇದಾದ ಮೂರುನಾಲ್ಕು ದಿನಗಳಾದುವು. ಒಂದುದಿನ ನಾಣಿ ತನ್ನ ಸಹಪಾಠಿಗಳೊಂದಿಗೆ ಪ್ರೊಫೆಸರ ಲೆಕ್ಚರ್ ಮುಗಿಸಿಕೊಂಡು ಕ್ಲಾಸಿನಿಂದ ಹೊರಗೆ ಬರುತ್ತಿದ್ದ. ಮೊದಲು ಪ್ರೊಫೆಸರು ಹೊರಗೆ ಬಂದಿದ್ದರು. ವರಾಂಡಾದ ಕಂಭದ ಹತ್ತಿರ ಒಂದು ವರ್ಷದ ಗಡ್ಡ ಬಿಟ್ಟುಕೊಂಡು ಹಳೆಯಬಟ್ಟೆಯನ್ನು ಹಾಕಿಕೊಂಡು, ಹಾಸನದ ಟೋಪಿಯೊಂದನ್ನು ತಲೆಯ ಹಿಂದುಗಡೆಗೆ ಸಿಕ್ಕಿಸಿಕೊಂಡು, ಆರುಸಾಲು ಹಲ್ಲನ್ನೂ ತೋರಿಸುತ್ತಾ ಒಬ್ಬ ಮಧ್ಯ ವಯಸ್ಕನು ನಿಂತಿದ್ದಾನೆ. ಪ್ರೊಫೆಸರು ಇವನನ್ನು ನೋಡಿದರು. ಸಹಜವಾಗಿ ಬಂದ ವಾಕರಿಕೆಯನ್ನು ತಡೆದುಕೊಂಡು "ಏನು ಬೇಕಯ್ಯಾ ನಿನಗೆ. ಇಲ್ಲಿ ಏತಕ್ಕೆ ಕಾದಿರುವೆ" ಎಂದು ದೂರದಿಂದಲೇ ಕೇಳಿದರು.

'ನನ್ನ ತಮ್ಮನನ್ನು ನೋಡಲು ಬಂದೆ ಸಾರ್.'

'ಯಾರು ನಿನ್ನ ತಮ್ಮ'

'ನಾಣಿ ಅಂತ ಸಾರ್, ನಾವು ಕರೆಯೋದು, ನಾರಾಯಣಚಾರ್ ಎಂದು ಅವನ ಪೂರ್ತಿಹೆಸರು'

'ಯಾಕಯ್ಯಾ ಅವನನ್ನು ನೋಡಬೇಕು'

'ನಮ್ಮ ತಾಯಿಗೆ ಖಾಯಿಲೆ. ಹೇಳೋಕ್ಕೆ ಬಂದಿದ್ದೇನೆ ಸಾರ್' ಪ್ರೊಫೆಸರು ನಾಣಿಯನ್ನು ಕೂಗಿದರು. 'ಅಯ್ಯಾ ನಾರಾಯಣಾಚಾರ್ ನಿನ್ನ ಅಣ್ಣ ನಿನ್ನನ್ನು ಹುಡುಕಿಕೊಂಡು ಬಂದಿದ್ದಾನೆ. ನಿಮ್ಮ ತಾಯಿಗೆ ಖಾಯಿಲೆಯಂತೆ ವಿಚಾರಿಸು' ಎಂದರು.

ಈ ವೇಳೆಗೆ ನಾಣಿ ಸಾಕ್ಷಾತ್ತಾಗಿಯೂ ಉರಿದು ಬೀಳುತ್ತಿದ್ದ. ದೇವರೇನಾದರೂ ಸಾಕಷ್ಟು ಬಾಹುಬಲ ಕೊಟ್ಟಿದ್ದರೆ ಸೋಮುವನ್ನು ಕತ್ತು ಹಿಸಿಕಿಕೊಂದುಬಿಡುತ್ತಿದ್ದ. ಮೇಷ್ಟರು ಇಲ್ಲದಿದ್ದರೆ ಕಾಲಿನ ಚಪ್ಪಲಿ ಕಳಚಿಕೊಂಡು ದೂರದಿಂದಲೇ ಸೋಮುವಿನ ಮೇ

ಲೆ ಎಸೆಯುತ್ತಿದ್ದ. ಆದರೆ ಈಗ ಏನೂ ಮಾಡುವಹಾಗಿರಲಿಲ್ಲ.

'ಇವನ್ಯಾರೊ ನನಗೆ ಗೊತ್ತಿಲ್ಲ. ಇವನು ನನ್ನ ಅಣ್ಣನೂ ಅಲ್ಲ ಏನೂ ಅಲ್ಲ. ಹುಚ್ಚನಿರಬಹುದು' ಎಂದು ಪ್ರೊಫೆಸರಿಗೆ ಹೇಳಿದ.

ಸೋಮು ಉದ್ಗಾರತೆಗೆದ. 'ಅಯ್ಯೋ ಪಾಪಿ ನನ್ನನ್ನು ಗುರುತಿಸುವುದಕ್ಕೂ ನಿನಗೆ ಹೀನಾಯವೇ ಒಡಹುಟ್ಟಿದವನಾದರೂ, ನಾನು ಬಡವ, ವಿದ್ಯಾವಂತನಲ್ಲವೆಂದು ಹೀಗೆ ಅಲ್ಲಗಳೆಯಬಹುದೇ. ಹೋಗಲಿ ನನ್ನನ್ನು ಮರೆತರೂ ಪರವಾಗಿಲ್ಲ. ಅಲ್ಲಿ ನೋಡು. (ಎಂದು ದೂರದಲ್ಲಿದ್ದ ಒಂದು ಮರವನ್ನು ತೋರಿಸುತ್ತಾ) ನಿನ್ನ ನನ್ನ ತಾಯಿ ಬಂದು ಕೂತಿರುವಳು. ಆಕೆಯನ್ನು ನೋಡಿ ಮೂರುತಿಂಗಳಾದರೂ ಮನೆಗೆ ಬರದೆ ಮಾವನ ಮನೆಯಲ್ಲೇ ಸೇರಿಕೊಂಡಿದ್ದೀಯೆ. ಆಕೆಯನ್ನಾದರೂ ಒಂದೆರಡು ಮಾತನಾಡಿಸಿ ಬಾ' ಎಂದು ಹೇಳಿದನು.

ಅಲ್ಲದೆ ಪ್ರೊಫೆಸರ ಕಡೆಗೆ ತಿರುಗಿ 'ಸಾರ್ ನೀನಾದರೂ ಈ ಕೃತಘ್ನನಿಗೆ ಬುದ್ಧಿಹೇಳಿ, ಸಾರ್. ಅವನ ತಾಯಿಯನ್ನಾದರೂ ಮಾತನಾಡಿಸಿ ಬರಲಿ ಒಂದೆರಡು ನಿಮಿಷ. ನನ್ನ ಹತ್ತಿರ ಮಾತನಾಡದೆ ಇದ್ದರೆ ಕೆಡತು' ಎಂದು ಅವರನ್ನು ಬೇಡಿದ.

ಇವನು ಹುಚ್ಚನೇ ಇರಬಹುದೇನೊ ಎಂದಿದ್ದ ಆ ಪ್ರೊಫೆಸರು ಇವನು ತೋರಿಸಿದ ಮರದಕಡೆ ನೋಡಿದರು ಅಲ್ಲಿ ಯಾರೊ ಮುದುಕಿಯು ಕೂತಿದ್ದಳು. ಆಕೆಯನ್ನು ನೋಡಿ, ನಾಣಿಯ ಜಂಭವನ್ನು ನೆನದು ಆತನು 'ನಾರಾಯಣಾಚಾರ್, ತಾಯಿ ಎಂಬುವ ವಸ್ತು ಸಿಗುವುದು ದುರ್ಲಭ. ಹಾಗೆ ಅಲ್ಲಗಳೆಯಬಾರದು, ಮಾವನಮನೆ ಶಾಶ್ವತವಲ್ಲಪ್ಪಾ ಹೋಗಿ ಮಾತನಾಡಿಸು' ಎಂದು ಬುದ್ಧಿ ಹೇಳಿ ಹೊರಟುಹೋದರು.

ಅವರು ಹೊರಟ ಮರುಕ್ಷಣದಲ್ಲಿಯೇ ಸೋಮು ಓಡಿದ. ಒಂದೇ ಉಸುರಿಗೆ ಓಡಿದ, ಪುಲ್ಲಯ್ಯನು ಹೇಳಿದಂತೆ ಕಳ್ಳನನ್ನು ಕಂಡ ಪೋಲೀಸಿನವನಂತೆ ಓಡಿದ್ದ. ಹಿಂದುಮುಂದಾಗಿಯೇ ಓಡಿದ. ಅವನು ಓಡಿದ ವೇಗವನ್ನು ನೋಡಿದರೆ, ಇವನು ಸೈನ್ಯಕ್ಕೆ ಸೇರಿದರೆ ಸೇನಾನಾಯಕನೇ ಆಗುತ್ತಿದ್ದನೊ ಎನ್ನುವಂತಿತ್ತು.

ನಾಣಿ ಅವನನ್ನು ಹಿಂಬಾಲಿಸಿದ. ಆದರೆ ಏನೂ ಸಾರ್ಥಕವಾಗಲಿಲ್ಲ. ಸೂರ್ಯ ಕಿರಣಗಳನ್ನು ಅಟ್ಟಿಸಿಕೊಂಡು ಹೋದಂತಾಯಿತು. ಮಿಂಚಿನ ಅಂಚನ್ನು ಹಿಡಿಯಹೋದಂತಾಯಿತು.

ಉಳಿದ ಹುಡುಗರೆಲ್ಲರೂ ಸೋಮು ತೋರಿಸಿದ ಮರದ ಕಡೆಗೆ ಹೊರಟರು.

ಆ ಹೆಂಗಸು ನಾಣಿಯ ತಾಯಿಯೇ ನೋಡೋಣ ಎಂದು ಅಲ್ಲಿಗೆ ಹೋದರು. ಅಲ್ಲೇನೊ ಒಬ್ಬ ಮುದುಕಿ ಕೂತಿದ್ದಳು. ಆದರೆ ಅವಳು ಕಡಲೇಕಾಯಿ ಮಾರುತ್ತಾ ಕೂತಿದ್ದಳು. ಅವಳು ಅಲ್ಲಿಯೇ ದಿನಾ ಗಲೂ ಕೂಡುವ ಅಭ್ಯಾಸ. ಅವಳ ಹತ್ತಿರ ಕಡಲೇಕಾಯಿ ಕೊಂಡುಕೊಂಡು ಈ ಹುಡುಗರು ತಿನ್ನುತ್ತಾ, ನಾಣಿ ವಿಚಾರ ಮಾತನಾಡುತ್ತಿದರು.

“ಅವನು ಮೆರೆಯುತ್ತಿದ್ದುದಕ್ಕೆ ಸರಿಯಾಗಿ ಶಾಸ್ತಿ”

“ಮಾವನ ಮನೆ ಸರಿಗೆ ಅಂಚು ಇವತ್ತು ಅವನ ಸೊಂಟ ಕತ್ತರಿಸಿತೊ”

“ಸೋಮು ತಮ್ಮ-ಅಣ್ಣನ್ನ ಮರೆತ”

“ನಾಣಿ ತಾಯಿ ಕಡಲೇಕಾಯಿ ಮಾರುತ್ತಾಳೆ”

ಇತಾದಿ ಇತ್ಯಾದಿ ಮಾತುಗಳು.

*                *                *

ಇವತ್ತಿನ ತನಕ ನಾಣಿ ಸೋಮುವನ್ನು ಮಾತನಾಡಿಸಿಲ್ಲ. ನಾನೆಷ್ಟೋ ಪ್ರಯತ್ನಪಟ್ಟೆ. ಸೋಮುವಿನ ಕುಹಕ ಹುಡುಗಾಟ ಎಂದು ಹೇಳಿದೆ. ಅವನ ಮುದ್ದುತನವೇ ಈ ಪೊದ್ದು ಹಾಸ್ಯಕ್ಕೆ ಕಾರಣವೆಂದೆ, ಏನಾದರೂ ನಾಣಿ ಮನಸ್ಸು ಮರೆಯಲೊಲ್ಲದು. ನಾಣಿ ಮನ್ನಿಸಲೊಲ್ಲ.

*                *                *

ಸೋಮು ಶಿಕಾರಿಯ ವಿಚಾರ. ಮುಂದೆ ತಿಳಿಸುತ್ತೇನೆ.

(ಬೇಡ. ಮಹರಾಯಾ. ಬೇಡ. ಸಂಪಾದಕ).

—ಎಂ. [illegible] ಜಿ.

---

# ನವೀನ ಗಾದೆಗಳು-ಮದುವೆಯದು—

ಬೆರಳನ್ನು ತೋರಿಸಿದರೆ ಆ ಹುಡುಗಿ
ಕೈಯನ್ನೇ ಹಿಡಿದು ಬಿಡೋಣವೇ—

*                *                *

ಇವಳೆಂಥಾ ಚಿನಾಲಿ ಹುಡುಗಿ,
ಸುಮ್ಮನೆ ನಕ್ಕರೆ ಸೂರೆಲ್ಲಾ ಹರಡುತ್ತೆ.

*                *                *

ಮನೆಗೆ ಹೋದರೆ ಮಾತಾಡದ ಹುಡುಗಿ
ಹೇಳಿ ಕಳುಹಿಸಿದರೆ ಹಾಡುತ್ತಾಳೆಯೇ ?

*                *                *

ಹೂವಿನ ಜತೆಗೆ ಹುಡುಗಿನೂ ಬಾಡಿಹೋದಳು.

*                *                *

ಆಳಿಯ ಹಳ್ಳಕ್ಕೆ ಬಿದ್ದ ಅಂದರೆ
ಆಳಿಗೊಂದು ಉಡುಗೊರೆ.

*                *                *

ಹಿತ್ತಲ ಗಿಡ ಮದ್ದಲ್ಲ,
ಸೋದರ ಕಡೆ ಸೊಗಸಲ್ಲ.

# ರಾಜೀವಪುರದ ರಾಜಕೀಯ

## 'ಅರಣ್ಯಕ್ಕೆ ಪ್ರಾಸ ಹಿರಣ್ಯ'

ಯುದ್ಧದ ವಿಚಾರ ಕೇಳಿಕೇಳಿ ತಲೆ ಚಿಟ್ಟುಹತ್ತಿ ಹೋಗಿತ್ತು. ಆದುದರಿಂದ ನಮ್ಮೂರಿನ ಕರ್ನಾಟಕ ಸಂಘದವರು ಕವಿಸಮ್ಮೇಳನ ಏರ್ಪಡಿಸಿದ್ದಾರೆಂದೂ ಅಂದು ಸಾಯಂಕಾಲ ಕವಿಗಳು ತಮ್ಮತಮ್ಮ ಉತ್ತಮ ಕವನಗಳನ್ನು ಓದುತ್ತಾರೆಂದೂ, ನಾನು ಬರಬೇಕೆಂದೂ ಒಂದು ಆಹ್ವಾನವು ಬಂದಾಗ ಸಂತೋಷದಿಂದ ಸಂಘಕ್ಕೆ ಹೋದೆ. ಅಲ್ಲಿಯೂ ಕಾರ್ಯಕ್ರಮಗಳು ಆರಂಭವಾದುವು.

ಮೊದಲ ಕವಿಯು ಭಾಮಿನಿಷಟ್ಪದಿಯಲ್ಲಿ ತಾನು ಬರೆದ ಕಾಡಿನ ಪದ್ಯವೊಂದನ್ನು ಓದಿದನು. ಎರಡನೆಯವನು ಪಂಚಪಂಜ್ಞಿ ಪದ್ಯದ ಗೊಂಚಲೊಂದನ್ನು ಹಾಡಿದನು. ಇದು ಇಂಗ್ಲೀಷಿನ Limerick ತೆರನಾಗಿದ್ದು ನನಗೇಕೊ ಮನೋರಂಜಕವಾಗಿತ್ತು. ಈ ಪದ್ಯಗಳನ್ನು ಓದಿದನಂತರ ಮೂರನೆಯವನು ಓದುವುದಕ್ಕೆ ಮುಂಚೆಯೇ ಅಧ್ಯಕ್ಷರೆದ್ದು ಈಗ ಓದಿದ್ದು ಪದ್ಯವಲ್ಲ. ಪದ್ಯದ ಅಣಕವಾಡು, ಆಂಗ್ಲೇಯ ಭಾಷೆಯ ಎಂಜಲು ಇತ್ಯಾದಿಯಾಗಿ ಅಲ್ಲಗಳೆದರು. ತೊಗೊಳ್ಳಿ, ಒಂದು ಯುದ್ಧವೇ ಆರಂಭವಾಯಿತು. Limericks ತೆರನಾದ ಪಂಚಪಂಜ್ಞಿ ಪದ್ಯಗಳು ಸರಸ್ವತಿಗೆ ಅವಮಾನಮಾಡಿದಂತೆಂದೂ, ಕರ್ನಾಟಕಾಂಬೆಗೆ ಬೇಲಿ ಹೂವು ಪೂಜೆ ಮಾಡಿದಂತೆಂದೂ, ವಿಧವಿಧವಾಗಿ ಬಯ್ಯುವ ಹಿರಿಯರ ಗುಂಪೊಂದು ಕಡೆ. ಈ ಪದ್ಯಗಳು ಹಾಸ್ಯಭರಿತವೆಂದೂ, ಇವುಗಳಿಂದ ಕರ್ನಾಟಕಾಂಬೆಯು ಒಮ್ಮೆಯಾದರೂ ಸುಖದಿಂದ ನಗುಮುಖಳಾಗುವಳೆಂದೂ, ಸರಸ್ವತಿಯು ಈ ಹಾಡುಗಳಿಂದ ತನ್ನ ವೀಣೆಯ ಭಾರವನ್ನೂ ಮರೆಯುವಳೆಂದೂ ಕಿರಿಯರ ವಾದ. ಈ ಸಮರವು ಸಂಪೂರ್ಣವಾಗುವ ಮೊದಲೇ ಸಭೆಯು ಮುಕ್ತಾಯವಾಯಿತು. ನಾನೂ ಹಿಂತಿರುಗಿದೆ.

ಮನೆಗೆ ಬಂದು ಈ ಪದ್ಯವೊಂದನ್ನು ರಚಿಸಲು ಪ್ರಯತ್ನಪಟ್ಟೆ. ಮೊದಲ ಪಂಜ್ಞಿ ಸಿದ್ಧವಾಯಿತು ಸುಲಭವಾಗಿ.

ಊರಾಚೆ ಇರುವುದೊಂದು ದೊಡ್ಡ ಅರಣ್ಯ.

ಎರಡನೆ ಸಾಲಿಗೆ 'ಅರಣ್ಯ'ಕ್ಕೆ ಪ್ರಾಸಹೊಂದುವ ಮಾತೊಂದು ಬೇಕಾಯಿತು. ಸರಣ್ಯ ಕರಣ್ಯ ಬಿರಣ್ಯ ಗುರಣ್ಯ ಜರಣ್ಯ ಏನೇನೋ ಯೋಚನೆಮಾಡಿದೆ. ಹೊಸಮಾತನ್ನು ಸೃಷ್ಟಿಸದೆ ಇದ್ದರೆ ಬೇರೆ ಮಾತು ಸಿಗುವುದಿಲ್ಲ ಎನ್ನಿಸಿತು.

ಆ ವೇಳೆಗೆ ಯಾರೋ ನನ್ನ ಹೆಸರು ಹಿಡಿದು ಕೂಗಿದರು. ಹೊರಗೆ ಹೋಗಿ ನೋಡಿದರೆ ನನ್ನ ಬಾಲ್ಯದ ಗೆಳೆಯ-'ಸಖಾತೆ'-ಅವನ ಹೆಸರು ಪೂರ್ಣರಾಯನ ಖಾತೆ ಎಂದು. ಈಗ ಪಿ. ಸಖಾತೆ ಆಗಿದ್ದಾನೆ. ಮತ್ತು ರಾಜೀವಪುರದಲ್ಲಿ ಒಂದ್ಯ ಪತ್ರಿಕೆಯನ್ನು ಹೊರಡಿಸುತ್ತಾ ಜೀವನ ನಡೆಸುತ್ತಾನೆ. ಬಹಳ ದಿನಗಳಿಂದಲೂ ಆತನನ್ನು ಕಂಡಿರಲಿಲ್ಲವಾದ್ದರಿಂದ ಸಹಜವಾದ ಉತ್ಸುಕತೆಯಿಂದ ಒಳಕ್ಕೆ ಕರೆದು ಕೊಂಡು ಹೋದೆ. ನನ್ನ ಮೇಜಿನ ಮೇಲಿದ್ದ ಬರೆಯುವ ಸಾಮುಗ್ರಿಗಳನ್ನು ಕಂಡು ಯುತ್ತಿದ್ದಿ. ಇದೇನು ಊರಿನಾಚೆ ಆರಣ್ಯ ಊರೊಳಗೆ ಅರಣ ವಿರುವುದೇ—ಅರಣ್ಯದೊಳಗೆ ಊರೇ" ಎಂದು ವೇದಾಂತಕ್ಕೆ ಆರಂಭಿಸಿದ. ಬೇಗ ಉತ್ತರಕೊಟ್ಟು ಈ ಪಂಚಪಂಜ್ನಿ ಪದ್ಯವನ್ನು ಜ್ಞಾಪಿಸಿದೆ. ಸಂಘದ ಸಭ್ಯರ ವನ್ನು ಬಾತ್ಮೀ ಮಾಡಿದೆ. ಅರಣ್ಯಕ್ಕೆ ಪ್ರಾಸದ ಮಾತನ್ನು ಹುಡುಕುತ್ತಿದ್ದೆನೆಂದೆ. ಸಲಹೆಯನ್ನು ಕೇಳಿದೆ. ಕೂಡಲೇ ಅವನಂದ 'ಹಿರಣ್ಯ' ಎಂದು ಸರಿ. ಅರಣ ದಲ್ಲಿ ಹಿರಣ್ಯವೆಲ್ಲಿ. ಕಾಡಿನಲ್ಲಿ, ಕಾಡುಜನರಿರುವಲ್ಲಿ ಕಾಸೆಲ್ಲಿ ಬಂತು. ಪ್ರಾಸಹೊಂದಿ ಬಂದರೂ ಅರ್ಥವಿಲ್ಲವಲ್ಲ ಎಂದೆ. 'ಅಯ್ಯೋ ಮಂಕೆ ಅರಣ್ಯದಲ್ಲಿ ಹಿರಣ್ಯವಿಲ್ಲವೇ ? ನಮ್ಮ ರಾಜೀವಪುರದ ಅರಣ್ಯದಲ್ಲಿ ಬರೀ ಹಿರಣ್ಯದ ಬೆಳೆಯೇ. ಹೇಳುತ್ತೇನೆ ಕೇಳು' ಎಂದು ತನ್ನ ಕತೆ ಹೇಳಿದ.

* * *

"ರಾಜೀವಪುರದಲ್ಲಿ ಮಲೆನಾಡು ಪ್ರದೇಶ ತುಂಬಾ ಇದೆ. ಅಲ್ಲಿ ಒಂದೊಂದು ಅರಣ್ಯಕ್ಕೂ ಸರಕಾರದವರು ಒಂದೊಂದು ಅಧಿಕಾರಿಯನ್ನು ಗೊತ್ತುಮಾಡಿದ್ದಾರೆ. ಅರಣ್ಯದ ಮರಗಳನ್ನೆಲ್ಲಾ ಆತನು ಗುರ್ತುಮಾಡಿ ಪಟ್ಟಿ ಇಟ್ಟಿರುತ್ತಾನೆ. ಯಾರೂ ಅವುಗಳನ್ನು ಕಡಿಯದಂತೆ ಕದ್ದುಹೋಗದಂತೆ ನೋಡಿಕೊಳ್ಳುತ್ತಾನೆ. ಅವುಗಳೆಲ್ಲಾ ಚೆನ್ನಾಗಿ ಬೆಳೆದನಂತರ ಹರಾಜುಮಾಡಿ ಬಂದ ಹಣವನ್ನು ಸರ್ಕಾರಕ್ಕೆ ಕಟ್ಟಿ ಸರ್ಕಾರದಿಂದ ಸಂಬಳ ಪಡೆಯುತ್ತಾನೆ. ಈ ಮಧ್ಯೆ ಯಾರಾದರೂ ಕಳ್ಳರು ಅರಣ್ಯ ದಿಂದ ಮರಗಳನ್ನು ಕಡಿದು ಸಾಗಿಸಹೋದರೆ ಅವರುಗಳನ್ನು ಹಿಡಿದು ತಾನೇ ವಿಚಾರಿಸುತ್ತಾನೆ. ಚಿಕ್ಕಪುಟ್ಟ ಅಪರಾಧಗಳಾದರೆ ಅವರಿಗೆ ಜುಲ್ಮಾನೆ ಹಾಕಿ ಆ ದಂಡದ ಹಣವನ್ನು ಸರ್ಕಾರಕ್ಕೆ ಸಲ್ಲಿಸುತ್ತಾನೆ. ದೊಡ್ಡದೊಡ್ಡ ಅಪರಾಧಗಳಾ ದರೆ ಪೋಲೀಸಿನವರಿಗೆ ವರ್ತಮಾನ ಕೊಡುತ್ತಾನೆ. ಅವರುಗಳು ಮುಂದಿನ ಕ್ರಮ ನಡೆಸುತ್ತಾರೆ ನ್ಯಾಯಾಸ್ಥಾನದಲ್ಲಿ.

ನನಗೆ ತಿಳಿದ ಅಧಿಕಾರಿಯೊಬ್ಬನು ಅರಣ್ಯದಲ್ಲಿ ಹಿರಣ್ಯ ಬೆಳೆದ ಮಾರ್ಗವನ್ನು ಹೇಳುತ್ತೇನೆ ಕೇಳು. ಆತನು ತನಗೆ ಬೇಕಾದ ಹತ್ತಿಪ್ಪತ್ತು ಜನಗಳಿಗೆ ಅರಣ್ಯದಲ್ಲಿ ಮರ ಸೌದೆಗಳನ್ನು ತೆಗೆದುಕೊಂಡು ಹೋಗಲು ತಾನೇ ಒಪ್ಪುತ್ತಿದ್ದ. ಅವರುಗಳಿಂದ

ಕಲಾ ಇಷ್ಟಿಷ್ಟೆಂದು ರೂಪಾಯಿ ವಸೂಲು ಮಾಡಿಕೊಳ್ಳುತ್ತಿದ್ದ. ತಿಂಗಳಿಗೆ ಇಬ್ಬರಂತೆ, ಎರಡು ಅಪರಾಧಿಗಳನ್ನು ಪತ್ತೆ ಮಾಡಿದ ಹಾಗೂ ಅವರಿಂದ ಹತ್ತು ರೂಪಾಯಿ ಜುಲ್ಮಾನೆ ವಸೂಲ್ಮಾಡಿದ ಹಾಗೂ, ಆ ಹತ್ತು ಹತ್ತು ರೂಪಾಯಿಗಳನ್ನು ಸರ್ಕಾರಕ್ಕೆ ಜಮಾಮಾಡಿದ ಹಾಗೂ ತನ್ನ ದೊಡ್ಡ ಅಧಿಕಾರಿಗೆ ಸುದ್ದಿ ಕಳು[illegible]ತ್ತಿದ್ದ. ಹತ್ತಿಪ್ಪತ್ತು ಜನಗಳಿಂದ ಇನ್ನೂರು ಮುನ್ನೂರು ರೂಪಾ[illegible]ದಿಸಿದಾಗ ಇಪ್ಪತ್ತು ರೂಪಾಯಿ ಕಟ್ಟುವುದೇನು ಕಷ್ಟ. ಹೀಗೆ ಮಾಡಿ ತಾನು ತನ್ನ ಕಿಸೆಯನ್ನು ಬೆಚ್ಚಗೆ ಮಾಡಿಕೊಳ್ಳುವುದಲ್ಲದೇ ಮೇಲಧಿಕಾರಿಗಳಿಂದ ಒಳ್ಳೆಯ ಕೆಲಸಗಾರನೆಂದೂ ಚೂಟಿಯ ಅಧಿಕಾರಿಯೆಂದೂ, ಇಂತಹವನಿಗೆ ಹೆಚ್ಚು ಸಂಬಳ ಕೊಡಬೇಕೆಂದೂ ಹೆಸರು ಪಡೆಯುತ್ತಿದ್ದ.

ಇದಲ್ಲದೆ ಬೇರೆ ಬೇರೆ ಮಾರ್ಗಗಳಿಂದಲೂ ಅರಣ್ಯದಲ್ಲಿ ಹಿರಣ್ಯ ಬೆಳೆಯಬಹುದು. ಒಂದೊಂದು ಮಾರ್ಗವೂ ಒಂದೊಂದು ದೊಡ್ಡ ಕತೆ." ಸಮಯ ದೊರೆತಾಗ, ಅರಣ್ಯದ ವಿಚಾರವಾಗಿ ಒಂದು ಕಾದಂಬರಿಯನ್ನೇ ಬರೆಯುತ್ತೇನೆ ಎಂದು ಕತೆ ಮುಗಿಸಿದ.

* * *

'ನನಗೆ ಪ್ರಾಸದ, ಸಅರ್ಥಕವಾದ ಮಾತು ದೊರೆಯಿತು. ನನ್ನ ಪದ್ಯವನ್ನು ಮುಗಿಸಿದೆ.

ಊರಾಚೆ ಇರುವುದೊಂದು ದೊಡ್ಡ ಅರಣ್ಯ,
ಬೇರು ಬಿಟ್ಟು ಬೆಳೆವುದಲ್ಲಿ ತುಂಬು ಹಿರಣ್ಯ,
ಪೆದ್ದ ಸರಕಾರ
ಮೊದ್ದು ಅಧಿಕಾರಿ
ಇವರುಗಳನು ಮೋಸಗೊಳಿಪನವನೆ ಗಣ್ಯ.

---

ಭದ್ರಾವತಿಯ ಮುಷ್ಕರಕಾರಿಗಳೆಲ್ಲಾ ಈಗ ಖುಲಾಸೆಯಾಗಿದ್ದಾರಂತೆ.
— ಮುಷ್ಕರಕಾರಿ ಅಧಿಕಾರಿಗಳೆಲ್ಲಾ ಮೊದಲೇ ಖುಲಾಸೆಯಾಗಿದ್ದರಲ್ಲವೇ?

* * *

ಹೆಬ್ಬಿಗುಬ್ಬಾಲೆಯಲ್ಲೊಬ್ಬನಿಗೆ ಚರ್ಮವು ಗಜ ಚರ್ಮದಂತಿರುವುದಂತೆ.
—ರಾಜಕೀಯ ರಂಗಕ್ಕೆ ಧುಮುಕದೆ ಅವನು ಸುಮ್ಮನೆ ಏತಕ್ಕಿದ್ದಾನೆ?



ಒಂದು ಬಿಡಿ ಕಾಸೂ ಇಲ್ಲವಲ್ಲೋ ! ಸೀನೇ ನೋಡು !
ಇರುವುದೆಲ್ಲ ಬರೀ ಬೆಳ್ಳಿ – ನಿಕ್ಕಲ್ಲು !

# ಮಾಸ ಭವಿಷ್ಯ

●

[ಭೂತ ಭವಿಷ್ಯ ಪುರಾಣದ ಆಧಾರದಮೇಲೆ 'ಕೊರವಂಜಿ'ಗಾಗಿ "ನಕ್ಷತ್ರಕ" ಬರೆದುದು]

●

**ಮೇಷ—**

ಹ ಕುಂ ಶೋ ಚಿ ಸೌ—ಈ ಜಗತ್ತಿನಲ್ಲಿ ವಿಶೇಷ ಭರಾಟೆಯಿಂದ ಓಡಾಡುವ ನಿರ್ಜೀವ ವಸ್ತುಗಳೆಂದರೆ ಲಾರಿಗಳು. ನಿಮ್ಮ ಮಕ್ಕಳನ್ನು ಅವುಗಳಿಗೆ ಅಡ್ಡಿಯಾಗಿ ಓಡಿಸಬೇಡಿ. ತಾ॥ ೨೫ ರಲ್ಲಿ ನಿಮ್ಮ ಮಿತ್ರರಿಂದಲೇ ನಿಮಗೆ ಮಂಗಳಾರತಿ ಆಗುವ ಸಂಭವವಿದೆ. ಈ ತಿಂಗಳಲ್ಲಿ ನಿಮಗೆ ಕೊರವಂಜಿಯೊಂದಿಗೆ ಕೆಲ ದಿನ ಇರುವ ಯೋಗ ದೊರೆಯುವುದು. ನಿಮ್ಮ ನಡತೆಯನ್ನು ಸರಿಯಾಗಿಟ್ಟುಕೊಳ್ಳಿರಿ. "ಶೀಲಂ ಪರಂ ದೂಷಣಂ" ನೆನಪಿರಲಿ. ಈ ರಾಶಿಯ ಸೌಭಾಗ್ಯವತಿಯರಿಗೆ ದೌರ್ಭಾಗ್ಯದ ಭೀತಿ ಇರುವುದರಿಂದ ಎಚ್ಚರಿಕೆ.

**ವೃಷಭ—**

ಗೆ ಳಿ ಗ ಡಿ ಗೇ ಳಿ ತಿ ೩೩—ಸಾಹಿತ್ಯ ಸಾಂಗತ್ಯ ಅನಾಹುತ ಅವ್ಯಾಹತ ಏಕೀಕರಣ ವಾತಾವರಣ ಮುಂತಾದ ಶಬ್ದಗಳು ಆಗಾಗ್ಗೆ ನಿಮ್ಮ ಕಿವಿಗೆ ಬೀಳುತ್ತವೆ. ಕೋಪಿಸಿಕೊಳ್ಳಬೇಡಿ. "ಕೋಪಾತ್ ಸಂಜಾಯತೆ ಸುಸ್ತುಃ" ಈ ರಾಶಿಯ ವಿದ್ಯಾರ್ಥಿಗಳು ಮಧ್ಯಾಹ್ನದ ಊಟವಾದ ನಂತರ ಉಪಾಹಾರದವರೆಗೆ ಉಪವಾಸವ್ರತವನ್ನು ಆಚರಿಸುವರು. ಇದರಿಂದ ಅಂತಹ ದೊಡ್ಡ ಕಾಹಿಲೆ ಯಾವುದೂ ಬರಲಾರದು. ಬಂದರೆ, ಸಂಬಂಧಪಟ್ಟವರಿಗೆ ತಂತಿ ಕಳುಹಿಸಿ.

**ಮಿಥುನ—**

ತೆ ಗ್ರ ಜಾ ಳಿ ಥಾ ನ ಮಾ ವಿ—"ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕುರಿ" ಎಂಬಂತೆ ನಿಮಗೆ ಈ ತಿಂಗಳು ಭೂಗರ್ಭಯೋಗವಿರುವುದು. ಗುಳಿಯೊಳಗೆ ಕೂಡುವ ಭಾಗ್ಯ ದೊರೆತರೂ ದೊರೆಯಬಹುದು. ಆದ್ದರಿಂದ, ಹುಷಾರಿ! ಅಭ್ಯಾಸ ಕಾಲದಲ್ಲೆಲ್ಲಾ ಗುಳಿಯ ಹತ್ತಿರವೇ ಸುಳಿಯಿರಿ!

**ಕರ್ಕಾಟಕ—**

ತೆಂ ಡಂ ರು ಗ ಲೋ ಸಾ—"ಅಸಹ್ಯ ಮನುಭೋಕ್ತವ್ಯಂ" ಚಿಂತಿಸಿ ಫಲ

ವೇನು? ನಿಮ್ಮ ರಾಶಿಯೇ ಕರ್ಕಾಟಕವಾಗಿರುವಾಗ ಬೇರೆ ಕಾರ್ಕೋಟಕನನು ಹುಡುಕಬೇಕಾದ್ದಿಲ್ಲ. ಅಯ್ಯೋ! ಇಷ್ಟು ತಿಳಿಯದೆ? ಸಾಲಗಾರರ ಸಾಲನ್ನು ಬಿಟ್ಟು ಹಿಂದಿನ ಬೀದಿಯಿಂದ ನುಸುಳಿದರೆ ಕ್ಷೇಮ.

**ಸಿಂಹ—**

ಮ್ದ ರಿ ದು ಲು ದ ಕೂ — ನೀವು ಸುಮ್ಮನೆ ತಲೆ ಖರ್ಚುಮಾಡಬೇಡಿರಿ, ಪಾಪ! ಅದರೊಳಗೇನಿದೆ? ನಿಮ್ಮ ಸಾಡೇಸಾತಿ ಇನ್ನೂ ಮುಗಿದಿಲ್ಲ. ತಾ|| ೧೮ರಲ್ಲಿ ಕೋರ್ಟಿನ ಹತ್ತಿರ ತಿರುಗಾಡಬೇಡಿ-ಅಪಾಯ. ಮಳೆ ಬಂದರೆ ನುಗ್ಗಬೇಕಾಗುವುದು.

**ಕನ್ಯಾ—**

ತ್ರ ತಂ ತ ನೀ ವ ನ — "ಎಲವೋ ಮಾನವಾ! ನಿನ್ನ ನೌಕರಿ ಕಾಯಂ ಇಲ್ಲವಿದ್ದರೆ ಕಾಯಂ ಮಾಡಿಕೊಳ್ಳಲು ಈ ತಿಂಗಳಲ್ಲಿ ವಿಶೇಷ ಅನುಕೂಲವುಂಟು" ಎಂದು ನವಗ್ರಹಗಳೂ ಕೂಗಿ ಹೇಳುತ್ತಿವೆ. "ಉದರ ನಿಮಿತ್ತಂ ಬಹುಕೃತ ವೇಷಂ." ಕೂಡಲೇ ನಿಮ್ಮ ಸಾಹೇಬರ ಅಳಿಯಂದಿರನ್ನು ಭೇಟಿ ಮಾಡಿ ಮಾತುಕತೆ ನಡೆಸಿ.

**ವೃಶ್ಚಿಕ—**

ರೋ ಟ್ಟ ಭ ಡಿ ಡಾ ಉಂ — ನೀವು ಒಂದು ತತ್ವವನ್ನು ಇದುವರೆಗೂ ಮರೆತು ಮೋಸ ಹೋದಿರಿ. ಇನ್ನಾದರೂ ಎಚ್ಚೆತ್ತು ಅದನ್ನರಿತು ಅನುಸರಿಸಿದರೆ ನಿಮ್ಮ ಕಾಳಜಿ ತೊಲಗುವುದು. ಶರೀರಮಾದ್ಯಂ ಖಲು ಧರ್ಮಭೋಜನಂ"ಎಂಬುದೇ ಆ ಮಹಾ ವಾಕ್ಯ. ಇದರಂತೆ ನಡೆದರೆ ನಿಮಗೆ ಅನಾರೋಗ್ಯ ಅನೀಮಿಯಾ ಬೆಲೆ ಹತೋಟಿ ಆದಾಯ ತೆರಿಗೆ ಯಾವುದೂ ತಗಲುವ ಹಾಗಿಲ್ಲ—

**ಧನು—**

ಡು ರ ಎ ಲೆ ಸಾ ಮ — ಪಿತೃಕಾರಕ ಗ್ರಹವು ಸುದಾಮನಾಗಿರುವುದರಿಂದ ನಿಮ್ಮ ಮನಿಆರ್ಡರ್ ಸ್ಥಿತಿ ಉತ್ತಮವಿರದು. ಕಾರಣ, ದೋಸೆ ಎಂಬುದು ಎರಡಕ್ಷರದ ವೃತ್ತ ಪದಾರ್ಥವಾದರೂ ಅದು ಮಸಾಲೆಯೊಂದಿಗೆ ಮಿಶ್ರವಾಗಿ ನಿಮಗೆ ಪಿತ್ತ ವಿಕಾರವುಂಟುಮಾಡುವುದು. ಅದಕ್ಕಾಗಿ ನಿಮ್ಮ ಸ್ನೇಹಿತರಿಂದ ಸಾ. ದಾ. ವನ್ನೇ ವಸೂಲಿಸಿ. ತಾ|| ೨೯ರಲ್ಲಿ ನೀವು ಸಾಲ ಮಾಡಿದರೆ ಉತ್ತಮ! ಏಕೆಂದರೆ, 'ಆತ'ನಿಗೆ ಪರಾರಿ ಯೋಗವಿದೆ. ಆ ದಿನ "ಕೊಟ್ಟವನು ಕೆಟ್ಟ" ಎಂದು ಪಂಚಾಂಗದಲ್ಲೇ ಇದೆ. ಆದ್ದರಿಂದ ನೀವು "ಋಣಂ ಕೃತ್ವಾ ಪಠಂ ದೃಶೇತ್" ಎಂಬ ಹಿರಿಯರ ಉಕ್ತಿಯನ್ನು ನೆನಪಿನಲ್ಲಿಟ್ಟು ಕಾರ್ಯಾಚರಣೆ ಮಾಡಿ.

**ಮಕರ—**

ಡಾ ಪೀ ನಿ ಶ ಹಾ ಮ — ಈ ತಿಂಗಳಲ್ಲಿ ನಿಮಗೆ ಯಾರೋ ಒಬ್ಬ ಶನಿ ವಕ್ರಿಸುತ್ತಾನೆ. ಕಬ್ಬಿಣದ ಬಿಂದಿಗೆಯಲ್ಲಿ ಎಣ್ಣೆ ತುಂಬಿ ಅವನ ಫೋಟೋವನ್ನು ಅದರೊಳಗಿಟ್ಟು ಕರೀ ಕಾಲು ಚೀಲವನ್ನು ಅದರ ಕುತ್ತಿಗೆಗೆ ಸುತ್ತಿ ನಿಮ್ಮ ಪಕ್ಕದ ರೂಂನವನಿಗೆ ದಾನ ಮಾಡಿ-ಇದರಿಂದ ಎಣ್ಣೆ ಬೆಲೆ ಏರುವುದು. ದಾನ ಮಾಡುವಾಗ ಪಕ್ರಿಸಬಹುದಾದ ಶನಿಯನ್ನು ಕುರಿತು ಅಷ್ಟೋತ್ತರಗಳನ್ನು ಹೇಳಿ.

**ಕುಂಭ—**

ಸ ಮೋ ಗೆ ತಿ ಡ ಹೆಂ — "ಕುಂತಿಯ ಮಕ್ಕಳ ಹಾಗೆ ಆರು ಜನ" ಎಂಬರು ತಿಳಿದ ಜನರು ನಗುತ! ಹಾಗೆಯೇ ನಿಮ್ಮ ವಿಷಯದಲ್ಲೂ ನಕ್ಕಾರು. "ನಗೆಯಿದ್ದವಗೆ ಹಗೆಯಿಲ್ಲ" ಎಂಬ ಹಾಗೆ ನೀವು ನಿದ್ರೆ ಮಾಡುವಾಗಲೂ ನಗುತ್ತಿರಬೇಕು. ನಿಮ್ಮ ಜೇಬಿನಲ್ಲಿರುವ ತೂತುಗಳನ್ನು ಜಾಗರೂಕತೆಯಿಂದ ಕಾದುಕೊಳ್ಳಿರಿ. ನಿವ ಸಹಧರ್ಮಿಣಿ ತವರು ಮನೆಗೆ ಬರೆದ ಕಾಗದ ಜೇಬಿಂದ ಬಿದ್ದುಹೋಯಿತೆಂದೂ ಆದ್ದರಿಂದ ಅದನ್ನು ಪೋಸ್ಟ್ ಮಾಡಲು ಸಾಧ್ಯವಾಗಿಲ್ಲವೆಂದೂ ಹೇಳಲು ಅದೊಂದೇ ಉಪಾಯ.

**ಮೀನ—**

ಳು ಗ ಗ ಮ್ಯ ಡು ಕಾ — "ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ" ಎಂದು ಅರ್ಜುನನೇ ಹೇಳಿರುವಾಗ, ನೀವು ಏಕೆ ಆತುರಪಡುವಿರಿ! ನಿಧಾನ! ನಿಧಾನ! ಪರಮ ನಿಧಾನ!! ಈ ರಾಶಿಯ ತರುಣರಿಗೆ ಈ ತಿಂಗಳಲ್ಲಿ ಪ್ರಾಣಿಗಳಿಂದ ಅಪಾಯವಾಗುವ ಯೋಗವಿದೆ. ಆದ್ದರಿಂದ ಹಾಸ್ಟಲ್‌ನಲ್ಲಿರುವವರು ಸ್ನಾನ ಮಾಡುವಾಗ ಹಾಡದಿರುವುದೇ ಮೇಲು. ಜೂಲೈ ೧ನೆಯ ತಾ|| ನಿಂದ ಹಾಡಬಹುದು. ಜನ್ಮಕಾಲದ ಗ್ರಹಬಲ ಚೆನ್ನಾಗಿದ್ದರೆ ನಿಮಗೆ ತಾ|| ೬ರಲ್ಲಿ ರಸ್ತೆಯಿಂದ ಕುದುರೆ ಲಾಯ ಸಿಕ್ಕಿದರೂ ಸಿಕ್ಕಬಹುದು. ಅದನ್ನು ಕೂಡಲೇ ಮಾರಿ ಕಾಫಿ ಕುಡಿಯಿರಿ. ಮನೆಗೆ ತೆಗಿದುಕೊಂಡು ಹೋದರೆ ಕುದುರೆಯೂ ಹಿಂದೆಯೇ ಬರುತ್ತದೆ.

---

ಯೂರೋಪಿನ ಸಂಗ್ರಾಮವನ್ನು ಸಂಸ್ಕೃತ ದೈನಂದಿನ ಪತ್ರಿಕೆಯೊಂದು ಈ ರೀತಿ ವಿವರಿಸಿದೆ.

"ಹಿಟ್ಲರು ಇಂದ್ರ ಪದವಿಗೋಸುಗ ನರಯಜ್ಞವನ್ನು ಮಾಡುತ್ತಿದ್ದಾರೆ."

ಅಂದರೆ ಕಡೆಯ ಆಹುತಿ ಸ್ವಯಂ ಆಹುತಿಯೊ ?




# ಲೋಧ್ರ

**ಗರ್ಭಾಶಯ ಟಾನಿಕ್**

ಆಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿ ಮಾಡುವುದು.

# ಅರ್ಕ

**ಶ್ರೇಷ್ಠ ಜ್ವರ ನಿವಾರಿಣಿ**

ಇನ್ಫ್ಲೂಯಂಜಾ ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು

# ಅಮೃತ

**ರಕ್ತಶುದ್ಧಿ ಟಾನಿಕ್**

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಯಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಯಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿ ಮಾಂದ್ಯ, ತಲೆ ತಿರುಗುವುದು, ಚರ್ಮರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ,** — — **ಬೆಂಗಳೂರು ಸಿಟಿ.**

# ಒಸಗೆ ನುಡಿ

## [ಒಂದು "ಪ್ರೀತಿ" ಪದ್ಯ]

[ಈ ಪದ್ಯದ 'ಪ್ರತಿ'ಯುನ್ನು 'ಕನ್ನಡ ಬಾವುಟ' ಎಂಬ ಗ್ರಂಥದಲ್ಲಿ 'ಕನ್ನಡ ತಾಯ ನೋಟ' ಎಂಬ ಶಿರೋನಾಮೆಯ ಕೆಳಗ ಕಾಣಬಹುದು. ಅದನ್ನು ಬರೆದವರು ಶ್ರೀಮಾನ್ ಶ್ರೀ ಅವರು.]

ಹಿರಿಯರಿರ! ಕೆಳೆಯರಿರ! ಅಣ್ಣತಮ್ಮದಿರ! ಮಿಕ್ಕ ಚಿಕ್ಕರಿರ!
ಒಸಗೆ ನುಡಿ ತಂದಿಹೆನು ನಾ ಕಂಡ ಮೀಸೆಯರ ಗಂಡನಿಂದ!
ಕೇಳುವಿರ ಕಿವಿಗೊಟ್ಟು? ಬೆಳೆಸುವಿರ ಹಟತೊಟ್ಟು? ಹೊತ್ತು ತಿರುಗುವಿರ?
ಕಣ್ಣಾರ ಕಂಡೆನವನನು;
ಕಂಡು ತಂದಿಹೆನು, ಕೇಳಿ.
ಅವನೆನ್ನ ಮೂದಲಿಸಿದುದನಾಡುವೆನು ನಿಮ್ಮಲ್ಲಿ. ಕೇಳಿ.

೨

ಕುದುರೆ ಮುಖದಲಿ ಒಂದು ಬಿರುಕು ಮಂಟಪದಿ ಕೈ ಮೇಲೆ ತಲೆಯೂರಿ
ಕುಳಿತಿದ್ದನಾ 'ಹೀರೋ' ಕಿವಿಯಿಂದ ಕಿವಿವರೆಗೆ ನರೆ ಮೀಸೆ ತೀಡುತ್ತ.
ಯಾರಯ್ಯ ನೀನೆಂದೆ; 'ಏತಕಿಂತೊಬ್ಬನೇ ಕುಳಿತಿರುವೆ ಕೊರಗುತ್ತ
ಅರವಿಂದ ಬೆಂದಿಹುದು, ಮೀಸೆ ತಾ ಬಾಡಿಹುದು ಕಾಂತಿ ಗುಂದಿಹುದು?'
ಕತ್ತೆತ್ತಿ ಕಣ್ಣೊರಿಸಿ ನಸುಬೆಳಕ ಕಣ್ಣನೆನ್ನ ಕಣ್ಣಲಿನೆಟ್ಟು, ಕೇಳು!
ಕಿವಿ ಬಿಚ್ಚಿ ಕೇಳು
ಎವೆ ಮುಚ್ಚಿ ಕೇಳು
ಕೇಳಿ ಪೌರುಷ ತಾಳಿ ಬೆಳೆಸಿ ಬಾಳು!
ಕೇಳಣ್ಣ ನಾನೊಬ್ಬ ಹಿಂದಿನಾ ಕನ್ನಡಿಗ! ಹುಲಿಯಾಗಿ ಬಾಳಿದವನೊಮ್ಮೆ;
ರಾಜರನು ಋಷಿಗಳನು ಕಲಿಗಳನು ಕವಿಗಳನು ಕರ್ಮವೀರರನು
ಕಂಡಿತೀ ಕನ್ನಡಂ, ಗಂಡುಗಲಿಗಳ ಗೂಡು ಮೀಸೆಯರ ತಾಯ್ನಾಡು!
ಕನ್ನಡದ ಸಿರಿಯಾಗಿ ಕನ್ನಡದ ಗುರಿಯಾಗಿ ಕನ್ನಡಿಗರಾನನದಿ
ಕೈಯೆತ್ತಿ ತಿರುಹಲದ ದಿಗ್ದಂತಿ ನಡುಗುತಿರೆ, ಇಳಿಮೀಸೆ ಇಲ್ಲದೆಯೇ,
ಮೀಸೆಯರು ನಾವೆಲ್ಲ ಇಳಿಯ ಮೀಸೆಯ ಗಂಡರೆಂದಾವು ಹಿಗ್ಗಿ
ಬಾಳಿದೆವು ಭಾಗ್ಯದಲಿ ಭಾರತವ ಬೆಳಗುತ್ತ, ನರಸಿಂಹರಂತೆ!
ಆ ಮೂರ್ತಿ ಆ ರೀತಿ ಈಗೆಲ್ಲಿ, ಕಂದ? ಆ ಮೀಸೆ ಮಾಯವಾಯ್ತೆ?
ಸೊಂಪಾಗಿ ಸೆಂಟೆರಚಿ, ಗೋಂದಿನಿಂ ಗಂಟಿಸಿದ ಹುರಿಮೀಸೆ ಮಾಯವಾಯ್ತೆ?
ಅರೆ ಮೀಸೆ, ನೊಣಮೀಸೆ,
ಒಣಮೀಸೆ, ಕಣಮೀಸೆ,
ಅಕಟಕಟ! ವದನದಲಿ ಬರಗಾಲ ಬಂಜೆತನ ಬೋಳಾಗಿ ಬಂದೆರಗಿತೆ?
ನಾವು ತೀಡಿದ ಮೀಸೆ ನೀವಿನ್ನು ಬೆಳೆಸುವಿರ? ಕೊಡು ನನಗೆ ವಾಗ್ದಾನ!"
ಎಂದನಾ ಮುದಿಮನುಜ
ಕನ್ನಡದ ಹಿರಿತನುಜ
ಕುದುರೆ ಮುಖದಲಿ ಕುಳಿತು
ನರೆಮೀಸೆ ತೀಡುತ್ತ.

ತಪ್ಪನೊಪ್ಪಿದೆ ನಾನು; ಬೆಪ್ಪಾಗಿ ಬಂದೆ; ಒಸಗೆ ನುಡಿನಡೆಸುವಿರಾ,
ಕೇಳದಿರ ಕಿವಿಗೊಟ್ಟು? ಬೆಳೆಸುವಿರ ಹಟತೊಟ್ಟು? ಹೊತ್ತು ತಿರುಗುವಿರಾ?

—ಬಾರಬರ.

# 'ರಾಜ್ಯಾಹೀರಾತುಗಳು'



[ರಾಜಕೀಯ ಪಂಗಡಗಳು ತಮ್ಮ ತಮ್ಮ ಸಾಧನೆಗೋಸ್ಕರ ಮುಖಂಡರನ್ನು ಪ್ರಚಾರ ಕ್ರಮಕ್ಕೆ ಕಳುಹಿಸುವುದು ವಾಡಿಕೆಯೇ ಆಗಿದೆ. ಜನ ಜಾಗ್ರತೆ ಉಂಟುಮಾಡಲು, ಜನರನ್ನು ತಮ್ಮ ಪರ ಮಾಡಿಕೊಳ್ಳಲು ಈ ಪ್ರಚಾರ ಸಭೆಗಳಿಗಿಂತ ಜಾಹೀರಾತುಗಳು ಫಲಕಾರಿ. ಅಂತೇ ಈ ರಾಜ್ಯಾಹೀರಾತುಗಳನ್ನು ಪ್ರಕಟಿಸಿದ್ದೇವೆ.]

—**ಸಂಪಾದಕ**

---

ರಾಜಿ ಬೇಕೋ? ಸಂಧಾನ ಬೇಕೋ? ಸಹಾಯ ಬೇಕೋ?

ಮೇಲ್ಕಂಡ ಎಲ್ಲ ವ್ಯವಹಾರಗಳನ್ನೂ ಲೇವಾದೇವಿಯನ್ನೂ ಎಲ್ಲಾ ಕೋಮಿನವರ ಹಿತಕ್ಕೆ ಅನುಕೂಲವಾಗಿರುವಂತೆ ನಂಬಿಕೆಯಾಗಿ ಮಾಡಿಕೊಡುತ್ತೇವೆ. ದಳ್ಳಾಳಿ ಮಿತ.

ಸಪ್ರೂ ಮತ್ತು ಸಪ್ರೂ
ಬ್ರೋಕರ್ಸ್ ಮತ್ತು ಕಮೀಷನ್ ಮತ್ತು ವ್ಯವಹಾರದ
**ಏಜೆಂಟ್ಸ್**

* * *

ಹೋಲ್ ಸೇಲ್ ವ್ಯಾಪಾರ! ನಿಮಗೆ ಬೇಕಾದ್ದೆಲ್ಲ ಇದೆ!

ಮಹಾಜನರ ಆಶಯದಂತೆ ನಮ್ಮ ಮಳಿಗೆಯನ್ನು ಇನ್ನೂ ಕೆಲವು ಕಾಲ ತೆರೆದಿರುತ್ತೇವೆ.

ಅಸಾದ್ ಮತ್ತು ಕಂಪೆನಿ.
ಇಂಪೋರ್ಟರ್ಸ್—ಅಲಹಾಬಾದ್

* * *

ಅಂಕ್ಲಿ ಶಾಮಣ್ಣ ಮಂಡಿ ವ್ಯಾಪಾರಿಗಳು ಮತ್ತು ಫಿಲ್ಮ್ ಡಿಸ್ಟ್ರಿಬ್ಯೂಟರು.

"ಇತರರನ್ನು ಏಕೆ ನಂಬಿ ಕೆಡುವಿರಿ."

"ನಮ್ಮಲ್ಲಿಗೆ ಬನ್ನಿ"

ಸಾಲಗಳು ಸುಲಭ ಬಡ್ಡಿಗೆ ದೊರೆಯುತ್ತವೆ. ಅಮೂಲ್ಯವಾದ ಸಲಹೆಗಳು ಉಚಿತವಾಗಿ ಬೇಕಾದ್ದಲ್ಲಿ ನಮ್ಮನ್ನು ಕೇಳಿ. ಮಧ್ಯಸ್ಥಿಕೆಯನ್ನು ಮಾಡುತ್ತೇವೆ. ಅಂತಃ ಕಲಹ ಕೋಮುವಾರು ಜಗಳ ಮುಂತಾದುವನ್ನು ನಿಲ್ಲಿಸುತ್ತೇವೆ. ಅಂತ

ರ್ರಾಷ್ಟ್ರೀಯ ಭಿನ್ನತೆಯನ್ನು ಸರಿಪಡಿಸುತ್ತೇವೆ. ಗೃಹಕಲಹದಲ್ಲೂ ನಾವೇ ಫೀ ಇಲ್ಲದೆ ಪ್ರವೇಶಿಸುತ್ತೇವೆ.

ವಿಳಾಸ—ರೂಸ್‌ವೆಲ್ಟ್—ಮ್ಯಾನೇಜರ್
ಡೆಮೊ ಕ್ರೇಸಿ ವಾಷಿಂಗ್‌ಟನ್

*　　*　　*

ನಿಮಗೆ　　ಬೇಕೇನು?

ಸ್ವರಾಜ್ಯ!　　ಸ್ವರಾಜ್ಯ!!　　ಸ್ವರಾಜ್ಯ!!!
ಯೋಚಿಸಿ ಫಲವಿಲ್ಲ!　　ಯತ್ನಿಸಿ ಸುಖವಿಲ್ಲ'!

ನಮ್ಮ ಸ್ವರಾಜ್ಯ ಮಾತ್ರೆಗಳಿಂದ ನಿಮ್ಮ ಜಾಡ್ಯವೆಲ್ಲ ಪರಿಹಾರವಾಗುತ್ತದೆ. ಇದನ್ನು ಸೇವಿಸುವ ಮೊದಲ ನಾಲ್ಕು ದಿನ ನಾವು ಹೇಳಿದಂತೆ ಕಣ್ಣು ಮೂಗು ಕಿವಿಗಳನ್ನು ಮುಚ್ಚಿಕೊಂಡಿರಬೇಕು. ಬೇರೆ ಪಥ್ಯ ಏನೂ ಇಲ್ಲ.

ನಮ್ಮಲ್ಲಿ ವ್ಯವಹರಿಸುವಾಗ ಪತ್ರ ಬರೆಯಬೇಕಾದ ತೊಂದರೆಯಿಲ್ಲ. ಎಲ್ಲಾ ವ್ಯವಹಾರ ಫೋನ್ ಮೂಲಕ ಇಲ್ಲವೇ ಬಾಯಿ ಮಾತುಗಳಿಂದ. ತ್ವರೆ ಮಾಡಿ. ಕೇವಲ ಕೆಲವೇ ಮಾತ್ರೆಗಳು ಉಳಿದಿವೆ.

ಪ್ರಧಾನ ಕಛೇರಿ—ಏಮೆರಿ ಔಷಧಾಲಯ. ಲಂಡನ್
ಬ್ರ್ಯಾಂಚು — ಲಿನ್‌ಲಿತ್—ಗೋಕುಲ—ಇಂಡಿಯ

*　　*　　*　　*

ಏಳಿ! ಎದ್ದೇಳಿ!! ಹಿಂದೂಮಹಾಜನರೆ ಎಚ್ಚರಗೊಳ್ಳಿ!!!
ನಿಶ್ಶಕ್ತಿಯಿಂದ ಇನ್ನೆಷ್ಟು ದಿನ ನರಳುವಿರಿ.

ನಿಮ್ಮ ಅಂಗಾಂಗಳಲ್ಲಿ ಶಕ್ತಿ ಸದಾ ಹರಿಯಬೇಕೊ? ನಿಮ್ಮ ಮೆದುಳಿನ ಶಕ್ತಿ ಹೆಚ್ಚಬೇಕೊ? ನೀವು ಧೈರ್ಯವಂತರಾಗಬೇಕೋ?—ಹಾಗಿದ್ದರೆ ಈಕ್ಷಣ ನಮಗೆ ಬರೆದು ನಮ್ಮ ಶ್ರೇಷ್ಠವಾದ 'ವಜ್ರಕವಚ'ವನ್ನು ತರಿಸಿಕೊಳ್ಳಿ.

ಇದನ್ನು ಒಂದು ದಿನ ಕಿಸೆಯಲ್ಲಿ ಧರಿಸಿದರೆ ನೂರನೆಯ ದಿನ ಪರಶುರಾಮನಂತೆ ಆಗುವಿರಿ.

"ಅರವತ್ತುವರ್ಷದ ಮುದುಕ ನಾನು ತಮ್ಮ ವಜ್ರಕವಚವನ್ನು ಧರಿಸಿ ಈಗ ಆರು ವರ್ಷದ ಹುಡುಗನಂತೆ ಆಗಿದ್ದೇನೆ. ತಮಗೆ ಅನಂತ ವಂದನೆಗಳು."

ಇತಿ ತಮ್ಮ ವಧೇಯ
ಸಾಹಸಕರ್ ಮೂಂಕರ್ಜಿ.

ನಮ್ಮ ವಿಳಾಸ—ಭೀಷಗ್ರತ್ನ ಸಮೂನ್‌ಕರ್
ಹಿಂದೂ ಮಹಾಲಯ ಮುಂಬಯಿ

— ಬಿ. ಚಂ.

ನೀವು ಧನಿಕರಾಗಿದ್ದರೆ ಬಡವರಿಗೆ ಸಹಾಯ ಮಾಡಲು ಏನು ಮಾಡುತ್ತಿದ್ದಿರಿ?
ಪ್ರಣಯಶ್ರಮವು ಎಂದಿಗೂ ನಿರರ್ಥಕವಾಗಲಾರದು

ಸುರೇಂದ್ರ ಮತ್ತು ರೋಸ್

ಲಕ್ಷಾಂತರ ಜನರ ಗಂಧರ್ವ

# "ಗರೀಬ್"

ನ್ಯಾಷನಲ್ ಸ್ಟೂಡಿಯೋಸ್‌ರವರ ಅತ್ಯದ್ಭುತ ಚಿತ್ರ

ಅದರಲ್ಲಿನ ರಸಪ್ರವಾಹದೊಂದಿಗೆ ತೇಲಿ ಹೋಗುವಿರಿ

ಧನಿಕ-ದರಿದ್ರರ ಪ್ರಣಯ
ಇದು ನಿಮಗೂ ಅನ್ವಯಿಸಬಹುದು

## ಸೆಲೆಕ್ಟ್‌ನಲ್ಲಿ

ತಾ|| ೨೬-೬-೪೨ರಿಂದ ದಿನವೂ ೩ ಪ್ರದರ್ಶನಗಳು

---

ಶಾಂತಾಆಪ್ಟೆ ಮತ್ತು ಚಂದ್ರಮೋಹನ್

ಭಾರತೀಯ ಚಿತ್ರ ಪ್ರಪಂಚದಲ್ಲಿ ವಿಖ್ಯಾತರಾದ ನಟನಟಿಯರು

# "ಅಪ್ನಾ ಘರ್"

— ಚಿತ್ರವು —

## ಸಾಗರ್‌ನಲ್ಲಿ ಮುಂದಿನ ಬದಲಾವಣೆ

ಇವು ಮಹೋನ್ನತ ಚಿತ್ರಗಳೆಂಬುದರಲ್ಲಿ ಭಿನ್ನಾಭಿಪ್ರಾಯವೇ ಇಲ್ಲ.

---

Distributors :

**SELECT PICTURES CIRCUIT,**
BANGALORE CITY & BEZWADA

# ಕಂತುವಿನ ಹಾವಳಿ

ರೇಖಾಗಣಿತವನ್ನು ಕನ್ನಡದಲ್ಲಾಗಲಿ ಇತರ ನುಡಿಗಳಲ್ಲಾಗಲಿ ಬರೆದಿರುವವರೆಲ್ಲರೂ ಆ ಶಾಸ್ತ್ರದ ತತ್ವಗಳು ಭಾರತ ವರ್ಷದಲ್ಲಿ ಯಜ್ಞಕುಂಡ ರಚನೆಗಳಾಗಿಯೂ ಕರ್ಣಕ್ಕೂ ಬಾಹುವಿಗೂ ಇರುವ ಸಂಬಂಧವನ್ನು ಕಂಡುಹಿಡಿಯುವುದಕ್ಕೂ ಉಪಯೋಗವಾಗುತ್ತೆಂದು ಒಪ್ಪಿಕೊಳ್ಳುತ್ತಾರೆ. ಅಲ್ಲದೆ, ಈಜಿಪ್ಟು ದೇಶದಲ್ಲಿ ಒಂದು ಪ್ರತ್ಯೇಕ ಕಷ್ಟವೊದಗಿತೆಂದೂ ಅದನ್ನು ಪರಿಹರಿಸಲು ಆ ಜನರು ರೇಖಾಗಣಿತವನ್ನು ಸೃಷ್ಟಿ ಮಾಡಿದರೆಂದೂ ಪಂಡಿತರು ಬರೆದಿರುತ್ತಾರೆ. ಅದೇನೆಂದರೆ, "ಭೂಮಿಯ ಅಳತೆಯ ಅವಶ್ಯಕತೆ." ಈಗಲೂ 'ಮನೆ, ಸೇತುವೆ, ಹಡಗು, ಆಕಾಶವಿಮಾನ ಮುಂತಾದುವುಗಳನ್ನು ನಿರ್ಮಿಸುವಾಗ ರೇಖಾಗಣಿತದ ಜ್ಞಾನವು ಅವಶ್ಯಕ' ಎಂದು ಶ್ರೀಮಾನ್. ಕೆ. ಮಂಜಯ್ಯನವರು ತಮ್ಮ ಗ್ರಂಥದ 'ವಿಷಯಪ್ರವೇಶ'ದಲ್ಲಿ ಹೇಳಿ ಹುಡುಗರನ್ನು ಹುರಿದುಂಬಿಸಿರುವರು.

ಸಮುದ್ರ ತೀರವೇ ಇಲ್ಲದ ಮೈಸೂರು ಸಂಸ್ಥಾನದ ಬಾಲಕ ಬಾಲಕಿಯರಿಗೆ ಹಡಗುಗಳನ್ನು ನಿರ್ಮಿಸಲು ಬೇಕಾದ ಅವಶ್ಯಕತೆ'ಯೇ ಇಲ್ಲದಿರುವುದರಿಂದ ರೇಖಾಗಣಿತ ಗ್ರಂಥಗಳಲ್ಲಿ ಆ ವಿಷಯದ ಅಭಾವಕ್ಕೆ ನಾವು ಯಾರನ್ನೂ ದೂಷಿಸುವಹಾಗಿಲ್ಲ. ಆದರೆ ಸೇತುವೆ, ಬಂಗಲಿ, ವಿಮಾನ ಇವುಗಳ ಪ್ರಸ್ತಾಪವೇ ಇಲ್ಲದೆ ನೂರಾರು ಪುಟಗಳ ರೇಖಾಗಣಿತ ಗ್ರಂಥಗಳು ಇಂದು ನಮ್ಮಲ್ಲಿ ಮಾರಾಟವಾಗುತ್ತಿವೆ! ಹಾಗಾದರೆ, ಆ ಗ್ರಂಥಗಳಲ್ಲಿ ಏನಿದೆ? ಅವುಗಳಲ್ಲಿ ಯಾವುದನ್ನು ವಿವರಿಸಿದಾರೆ? ಕೊಂಚ ಪರೀಕ್ಷೆಮಾಡೋಣ. ವಾಚಕರು ಯಾರಾದರೂ ತಮ್ಮ ಗೋತ್ರೋದ್ಧಾರಕರು ಕಲಿಯುತ್ತಿರುವ ಈ ಪುಸ್ತಕಗಳನ್ನು ತಿರುವಿಹಾಕಿದರೆ, ಅವರ ಕಣ್ಣಿಗೆ ಬೀಳುವುದು ಮೊದಲು "ಮೂರ್ತಿಪೂಜನಾಶಾಸ್ತ್ರ!," "ವಿಗ್ರಹಗಳ ನಿರ್ಮಾಣ!" ಉದಾಹರಣೆಗೆ— "ನಾಲ್ಕು ಬಾಹುಗಳು ಮತ್ತು ಒಂದು ಕೋಣ, ಇವುಗಳನ್ನು ಕೊಟ್ಟಾಗ ಚತುರ್ಭುಜವನ್ನು ರಚಿಸಿ". ರಚಿಸಿ ಅಂತ ಅಂದ ಮಾತ್ರಕ್ಕೆ ರಚಿಸಲು ಸಾಧ್ಯವಿಲ್ಲದ ಲೆಕ್ಕ ಇದು! ಏಕೆಂದರೆ, 'ಚತುರ್ಭುಜ' ನಾಲ್ಕು ಬಾಹುಗಳು ಸಾಲದೆ? ಕೋಣಯಾಕೆ? ಚತುರ್ಭುಜದ ದೇವತೆಗೆ ಬಲಿಕೊಡುವುದಕ್ಕೋ? ಅಥವಾ ಯಮರಾಯನನ್ನೇ ಸೃಷ್ಟಿಸಿ ಕೋಣನ ಮೇಲೆ ಕೂರಿಸಬೇಕೆಂಬುದೇ ರೇಖಾಗಣಿತಕಾರರ ಅಭಿಪ್ರಾಯವೋ?

ಇರಲಿ. ಕ್ಷೇತ್ರಫಲಗಳು ಎಂಬ ಅಧ್ಯಾಯದಲ್ಲಿ ವಿಧವಿಧವಾದ ಕ್ಷೇತ್ರಗಳಿಗೆ ಹೋದಾಗ ಬರುವ ಆಮುಷ್ಮಿಕ ಫಲಗಳನ್ನು ಖಚಿತವಾಗಿ ತಿಳಿಸಿದೆ. ಉದಾಹರಣೆಗೆ—"ಏಕ ಪಾದದ ಮೇಲೆ (ಅಂ

ದರೆ, ನಟರಾಜ ಪುಂಶಾವ ಮೂರ್ತಿಗಳಂತೆ) ಒಂದೇ ಎತ್ತರವನ್ನುಳ್ಳ ಒಂದು ತ್ರಿಭುಜವೂ ಒಂದು ಸಮಾನಾಂತರ ಚತುರ್ಭುಜವೂ (ಕ್ಷೇತ್ರವೊಂದರಲ್ಲಿ ಒಂದು ಕೈ ಮುರಿದ ಒಂದು ವಿಗ್ರಹವೂ, ಮತ್ತೊಂದರಲ್ಲಿ ಯಾವ ಕೈಯೂ ಮುರಿಯದ ಬೇರೊಂದೂ ವಿಗ್ರಹವೂ ಇದ್ದರೆ, ತ್ರಿಭುಜದ ಕ್ಷೇತ್ರಫಲ (ಅಂದರೆ, ಮುರಿದ ಕೈ ಮೂರ್ತಿಯನ್ನು ಪೂಜಿಸುವುದರ ಫಲ) ಸಮಾನಾಂತರ ಚತುರ್ಭುಜ ಕ್ಷೇತ್ರಫಲದ (ಅಂದರೆ, ಲಕ್ಷಣಯುತವಾದ ಮೂರ್ತಿಯನ್ನು ಪೂಜಿಸುವುದರ ಫಲದ) ಅರ್ಧದಷ್ಟಿರುವುದು." ಹೇಗಿದೆ ಬೋಧನೆ? ಸನಾತನಿಗಳು ಇದನ್ನು ಒಪ್ಪುತ್ತಾರೆಯೇ? ವೈಖಾನಸರು ಏನು ಹೇಳುತ್ತಾರೆ? ಪಾಂಚರಾತ್ರದವರ ಅಭಿಪ್ರಾಯವೇನು? ಲೆಕ್ಕಾಚಾರವಾಗಿ ನೋಡಿದರೆ ಮೂರು ಕೈ ಇದ್ದರೆ ಮುಕ್ಕಾಲು ಫಲವಾದರೂ ಸಿಗಬೇಡವೆ? ಅಥವಾ ಮುರುಕಲು ದೇವತೆಗೆ ಹರಕೆ ಹೊತ್ತರೆ ಫಲವುಂಟೆ? ರೇಖಾಗಣಿತ ಗ್ರಂಥಗಳಲ್ಲಿ ಇಂತಹ ಆಧ್ಯಾತ್ಮಿಕ ಉದಾಹರಣೆಗಳು ಅನೇಕವಿವೆ.

ಇವಲ್ಲದೆ, ಕೇವಲ ನಿರರ್ಥಕವಾದ ನೂರಾರು ಅಭ್ಯಾಸಗಳೂ ಇವೆ. "ಏ ಬೀ ಸೀ ತ್ರಿಭುಜದಲ್ಲಿ ಏಬಿ, ಬೀಸಿಗಳನ್ನು ಕ್ರಮವಾಗಿ ಛೇದಿಸಿ ಏಡಿ ಮತ್ತು ಸೀಇಗಳ ಮೊತ್ತದಷ್ಟು ಡೀ ಇ ಉದ್ದವಾಗುವಂತೆ ಡೀ ಇ ಸರಳರೇಖೆಯನ್ನು ಏ ಸೀಗೆ ಸಮಾನಾಂತರವಾಗಿ ಎಳೆಯಿರಿ." ಅಂತ ಭಾರತೀಯ ತರುಣರನ್ನು ರೇಖಾಗಣಿತಕಾರರು ಪ್ರೇರೇಪಿಸುತ್ತಾರೆ. ಹೀಗೆ ಎಳೆದಾಡಿದರೆ ನಮ್ಮ ಬಾಳು ಹಾಳು; ಸಾವು ಸುಮ್ಮನೆ.

ರೇಖಾಗಣಿತದ ನಿರರ್ಥಕತೆ ನನಗೆ ಮೊನ್ನೆ ಚೆನ್ನಾಗಿ ವೇದ್ಯವಾಯಿತು. ನನ್ನ ಮಗ, ಕಂಠುವನ್ನು ಕರೆದು "ಲೋ! ರೌಂಡಾಗಿರೋ ಈ ಕಾಸ್ಮಸ್ ಪಾತಿಯ ನಟ್ಟನಡುವೆ ಒಂದು ಗುಲಾಬಿ ಗಿಡ ನೆಡಬೇಕಲ್ಲೋ,"ಎಂದೆ. "ಅದಕ್ಕೇ ನಣ್ಣಾ! ನಮ್ಮ ರೇಖಾಗಣಿತದಲ್ಲಿ ಇದನ್ನು ಹೇಳಿಕೊಟ್ಟಿದ್ದಾರೆ" ಅಂದ. "ಪರವಾಗಿಲ್ಲ ಹಾಗಾದರೆ ಪಾತಿ ಮಾಡುವುದನ್ನೂ ಕಲಿಸಿದಾರೆಯೇ" ಅಂದೆ, ಕುತೂಹಲದಿಂದ. ನನಗೆ ಉತ್ತರ ಕೊಡಲ್ಲು ಕಂಠು ಅಲ್ಲಿ ನಿಲ್ಲಲೇ ಇಲ್ಲ. ತಕ್ಷಣ ಓಡಿ ಹೋಗಿ ಒಂದೆರಡು ಗೂಟಗಳನ್ನೂ ನಾಲ್ಕು ಮಾರು ಹಗ್ಗವನ್ನೂ ತಂದ. ಪಾತಿಯ "ಪಂಥಿ" (ಹಾಗೆ ಅಂತ ಅವನೇ ಹೇಳಿದ್ದು) ಯಲ್ಲಿ ಮೂರುಕಡೆ ಎ,ಬೀ,ಸಿ, ಅಂತ ಬರೆದ. ಆ ಮೇಲೆ ಏ ಬಿಂದುವನ್ನೂ ಬೀ ಬಿಂದುವನ್ನೂ ಸೇರಿಸಿ ಒಂದು ಗೆರೆ ಎಳೆದ. ಅಷ್ಟರಲ್ಲೇ ಕಾಸ್ಮಾಸ್ ಗಿಡಗಳು ಹಲವು ಹಾಳಾದುವು. ಆ ಮೇಲೆ ಪಾತಿಯನ್ನೆಲ್ಲಾ ತುಳಿದು ಓಡಾಡಿ ಹಗ್ಗ ಹಿಡಿದು ಜಗ್ಗಾಡಿ ಏಬಿ ಎಂಬ ಗೆರೆಯನ್ನು "ಅರ್ಧಿಸಿ" ದ. ಅರ್ಧಿಸಿದ ಜಾಗದಲ್ಲಿ ದೊಡ್ಡದಾಗಿ ಡೀ ಎಂದು ಬರೆದ. ಅದಕ್ಕಾಗಿ ಕೆಲವು ಹೂ ಗಿಡಗಳನ್ನು ಕಿತ್ತೆಸೆದ. "ಈಗ ನೋಡಣ್ಣಾ, ಡೀ ಎಂಬ ಬಿಂದುವಿನಿಂದ ಒಂದು ಸಮಕೋಣ ಮಾಡಿ ಸೀ ಬಿಂದುವಿಗೆ ಒಂದು

ರೇಖೆಯೆಳೆಯುತ್ತೀನೆ, ನೋಡುತ್ತಿರು'' ಅಂದ. ಎಳೆದ. ನೋಡುತ್ತಿದ್ದೆ. ನನಗೆ ಅರ್ಥವಾಗಲಿಲ್ಲ. ''ಯಾಕೋ ಹಾಗೆ ಮಾಡಿದೆ?'' ಅಂದೆ. ನನ್ನನ್ನು ನೋಡಿ ಹಲ್ಲು ಕಿರಿಯುತ್ತಾ ''ರೇಖಾಗಣಿತ'' ಅಂದ. ನಾನು ಸುಮ್ಮನಾದೆ.

ಆಮೇಲೆ ಡೀಯಿಂದ ಸೀಗೆ ಇನ್ನೊಂದು ಗೆರೆಎಳೆದು ಅದನ್ನ ವರ್ಧಿಸಿ ಪಂಥಿಯಲ್ಲೀ ಈ ಅಂತ ಬರೆದ. ಆಮೇಲೆ ಕಾಸ್ಮಾಸುಗಳನ್ನೆಲ್ಲಾ ತುಳಿದು ನಾಶ ಮಾಡಿ ಈಸೀ ಗೆರೆಯುನ್ನು ಕಷ್ಟದಿಂದ ವರ್ಧಿಸಿ, ಅಲ್ಲೀ ಎಫ್ ಅಂತ ಕೆರೆದ. ಎಫ್‌ನಲ್ಲೀ ಒಂದು ಗುಳಿ ತೋಡಿ ಗುಲಾಬಿ ಗಿಡವನ್ನು ಡಲುಬಗ್ಗಿದಾಗ. ಆಕೆ ಬಂದು''ಎಲ್ಲಿ ನೆಡುತ್ತಿಯೋ? ನಡುಮಧ್ಯ ನಡಬೇಕು'' ಅಂದಳು.

ಆಗ ಕಂಠು, ಅವಳೆದುರು ಹೋಗಿ ನಿಂತು, ''ನೋಡಮ್ಮಾ! ನಡುಮಧ್ಯ ಅನ್ನುವುದು ನೀನು ಅನುಮಾನಿಸಿದಂತೆ, ಎಫ್ ಅಲ್ಲವೆ ಇದ್ದರೆ, ''ಜಿ'' ಅಂತ ಇಟ್ಟುಕೊ'' ಎಂದು ಹೇಳಿ, ಪಾವತಿಯೊಳಕ್ಕೆ ಧುಮುಕಿ ''ಜಿ'' ಅಂತ ಒಂದು ಕಡೆ ಬರೆದು ಅಲ್ಲೀ ನಿಂತ. ''ಅಮ್ಮಾ ಆ ಗಿಡವನ್ನು ಇಲ್ಲಿ ನೆಟ್ಟರೆ, ಜೀ ಎ, ಜೀ ಬಿ, ಜೀ ಡಿ, ಗೆರೆಗಳನ್ನು ಕೊಂಚ ನೋಡು, ಎರಡು ತ್ರಿಭುಜಗಳು ಬರುತ್ತವೆ, ಜೀ ಡೀ ಎ, ಜೀ ಡೀ ಬಿ ಅಂತ.



ಅವುಗಳ ರಚನೆ ಹೇಗೆ? ಡೀಏನೂ ಡೀಬೀನೂ ಸಮ ಜೀ ಡಿ.ಎರಡಕ್ಕೂ ಸಾಮಾನ್ಯಸ್ವತ್ತು.ಆದ್ದರಿಂದ ಜೀ ಏ ನೂ ಜಿ ಬಿನೂ ಸಮ,ಆದ್ದರಿಂದ ಜೀ ಡಿ ಏ ಕೋಣ ಜೀ ಡೀ ಬೀ ಕೋಣ ಎರಡೂ ಸಮ" ಎಂದು ಪ್ರಾರಂಭಿಸಿದ.

ಆಕೆ ನನ್ನ ಹತ್ತಿರ ಬಂದು, "ಕಂಠೂನ ಈ ವರ್ಷ ಶಾಲೆಗೆ ಕಳುಹಿಸಬೇಡಿ ಪಾಪ! ಅವನ ಬುದ್ಧಿ ನೆಟ್ಟಗಿಲ್ಲ" ಅಂತ ಆಗಲೇ ಹೇಳಿದೆ, ಕಾಲಿಗೆ ಬಿದ್ದು ಕೇಳಿಕೊಂಡೆ........ಅನುಭವಿಸಿ!" ಅಂತ ಗೊಣಗುತ್ತಾ ಮನೆಯೊಳಕ್ಕೆ ಹೋದಳು.

ಜೀಬಿಟ್ಟು ಕಂಠು ಈಚೆಗೆ ಬಂದ "ಕಂಠೂ! ಕಾಸ್ಮಾಸ್ ಗಿಡಗಳು ಇದ್ದಿದ್ದರೆ ಗುಲಾಬಿ ಚೆನ್ನಾಗಿ ಕಾಣಿಸುತ್ತಿತ್ತು; ಅದಕ್ಕಾಗಿ ನೆಡಬೇಕಾಗಿತ್ತು, ಈಗ ಈ ಬೋಳು ಪಾತಿಗೆ ಆ ಅಲಂಕಾರ ಬೇಕಿಲ್ಲ; "ಹೋಗಿ ಓದು" ಅಂದೆ.

ಹೋದ. ರೇಖಾಗಣಿತ ಅಭ್ಯಾಸಮಾಡುತ್ತಾ ಕುಳಿತ.

---

ಮೊನ್ನಿನ ಕವಿ ಸಮ್ಮೇಳನದಲ್ಲಿ ಕವಿಗಳೆಲ್ಲರೂ ಪರದೆಗಳ ಹಿಂದೆ ಇದ್ದು ಕವಿತೆಗಳನ್ನೋದಿದರಂತೆ.

—"ಮುಂಜಾಗ್ರತಾ" ಕ್ರಮವು ಸುಗಮವಾಗಿ ನಡೆದಂತೆಯೇ.

*　　　*　　　*

ಕಾಸ್ ಬಂಗಲೆಯಲ್ಲಿ ಒಂದು ಸಿಂಹವು ಕಳೆದ ೮—೧೦ ದಿನಗಳಿಂದಲೂ ಘರ್ಜಿಸಿಯೇ ಇಲ್ಲವಂತೆ.

—ನಮ್ಮ ರಾಜಕಾರಣಪಟುಗಳಲ್ಲೊಬ್ಬರನ್ನು ಕಳುಹಿಸಿ ಅದಕ್ಕೆ ಘರ್ಜಿಸುವುದನ್ನು ಕಲಿಸಬಾರದೇ?

*　　　*　　　*

ಒಂದು ಚಾಪೆಯನ್ನು ಹೊತ್ತುಕೊಂಡು ಹೋಗುತ್ತಿದ್ದ ಪಾದಚಾರಿಯೊಬ್ಬನನ್ನು ಒಂದು ಮೋಟಾರು ಕೆಡವಿತಂತೆ.

—ನಡೆದು ಹೋಗುವಾಗ ಈ ತರಹ ಸಿದ್ಧತೆಗಳನ್ನು ಮಾಡಿಕೊಂಡು ಹೊರಡುವುದು ಒಳ್ಳೆಯದು.

# ಓದುಗರಿಗೆ ಒಂದು ಒರೆಗಲ್ಲು



**ಭರಮಪ್ಪನ ಭೂತ :** ಬರೆದವರು : "ಶ್ರೀರಂಗ" ಕ್ರೌ. ಅಷ್ಟ ಪುಟ ೧೧೮. ಮನೋಹರ ಗ್ರಂಥಮಾಲೆಯ ೩೩ನೆಯ ಕುಸುಮ, ಧಾರವಾಡ; ಮೇ ೧೯೪೨

ಇದು ಶ್ರೀರಂಗರ ಇತರ ಗ್ರಂಥಗಳ ಹಾಗಲ್ಲವೆಂದು ಅವರೇ ಅರಿಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಪ್ರಕಾಶಕರ ಅಭಿಪ್ರಾಯದಂತೆ ಇದೊಂದು ಪತ್ತೆದಾರಿ ಕಾದಂಬರಿ! ಮಾಮೂಲಿನಂತೆ ಇದರಲ್ಲೂ ಹತ್ತನೆಯ ಪುಟದಲ್ಲೇ ಒಂದು ಕೊಲೆ, ಮೂವತ್ತನೆಯ ಪುಟದಲ್ಲೇ ಕೊಲೆಮನೆಯ ರೇಖಾ ಚಿತ್ರವೂ, ನೂರೆಂಟನೆಯ ಪುಟದಲ್ಲೇ ಒಂದು ಆತ್ಮಹತ್ಯೆಯೂ ಕಟ್ಟಕಡೆಯ ಪುಟದಲ್ಲೇ ಕೊನೆಯ ಪಂಕ್ತಿಯಲ್ಲಿ 'ಭರಮಪ್ಪನ ಭೂತ'ದ ಪ್ರಸ್ತಾಪನೆಯೂ ಇವೆ. ವಿಮರ್ಶೆಗಾಗಿ ನಾವು ಗಂಭೀರವಾಗಿ ಕುಳಿತು ಈ ಗ್ರಂಥದ ಹಾಳೆಗಳನ್ನು ಸರಸರನೆ ತಿರುವುತ್ತಾ ಕುಳಿತರೆ ಪುಟ ೧೮ರಲ್ಲಿ 'ಮೈ ಜುಮ್ಮೆಂದಿತು'; ಪುಟ ೩೮ರಲ್ಲಿ 'ಮೈ ಜುಮ್ಮೆಂದಿತು'; ಪುಟ ೭೦ರಲ್ಲಿ 'ಎದೆ ಜಗ್ ಎಂದಿತು'; ಪುಟ ೯೦ರಲ್ಲಿ 'ಒಬ್ಬರ ಮುಖವನ್ನು ಒಬ್ಬರು ನೋಡಿದರು'; ಪುಟ ೧೦೪ರಲ್ಲಿ 'ಆಕಳಿಸುತ್ತಾ ತನ್ನ ಕೋಣೆಗೆ ಹೋದನು'; ಪುಟ ೧೧೭ರಲ್ಲಿ 'ಅವಳಿಗೆ ಪೂರ್ತಿಯಾಗಿ ತಿಳಿಯಿತು; ನಕ್ಕಳು'—ಎಂಬ ವಾಕ್ಯಗಳು ಕಣ್ಣಮುಂದೆ ಸುಳಿದಾಡಿ ಕಥಾಸರಣಿಯನ್ನು ಸ್ಥೂಲವಾಗಿ ತಿಳಿಸುತ್ತವೆ. ವಿಮರ್ಶಕನಿಗೆ ಇಷ್ಟೇ ಸಾಕು. ಆದರೆ ಬಡ ವಾಚಕನ ತ್ರಾಸವನ್ನು ತೂಗಿ ನೋಡುವವರು ಯಾರು? ಕೊಲೆ ಮಾಡಿದ್ದು ಆಳಲ್ಲ ಅಂತ ಪೋಲಿಸಿನವರೂ ಆಕೆಯಲ್ಲ ಅಂತ ನಾಲ್ಕು ಜನರೂ, ತಾವಲ್ಲ ಅಂತ ಇತರರೂ ಕನ್ನಡಿ ಅಂತ ಕಾದಂಬರಿಕಾರರೂ ತೀರ್ಪುಕೊಡುವ ಹೊತ್ತಿಗೆ ಕೊನೆಯ ಪುಟದಲ್ಲಿ ಶ್ರೀರಂಗರೇ ಹೇಳುವಹಾಗೆ 'ಅತ್ಯಂತ ದಣಿವಾದಂತಾಯಿತು.'

ಪತ್ತೆ ಕಾದಂಬರಿಗಳನ್ನು ಓದಿ ಉಳಿದುಕೊಳ್ಳಲು ಒಂದು ಸುಲಭಮಾರ್ಗವಿದೆ. ಕೊಲೆಯ ಸಮಾಚಾರವನ್ನು ತಿಳಿದಕೂಡಲೇ ಗುಟ್ಟಾಗಿ ಕೊನೆಯ ಅಧ್ಯಾಯವನ್ನು ಓದಿಬಿಡಬೇಕು. ಆ ಮೇಲೆ ನಡುವಣ ಅಧ್ಯಾಯಗಳು ಅರ್ಥವಾಗುತ್ತವೆ. ಆದರೆ, ಶ್ರೀರಂಗರ ಗ್ರಂಥವಾಚನಕ್ಕೆ ಈ ಉಪಾಯ ಅಷ್ಟು ಪ್ರಯೋಜನಕಾರಿಯಲ್ಲ.

ಕನ್ನಡಿಯೊಂದನ್ನು ಬೋಧಿ ಎಂಬುವವರು ನೆಲಕ್ಕೆ ತಿಕ್ಕಿತಿಕ್ಕಿ ಮೂಲೆಮೂಲೆಗಳನ್ನು ಮಾಡಿದ್ದಕ್ಕೂ ಭೂತಕ್ಕ ಭರಮಪ್ಪನಿಗೂ ಕೊಲೆಗೂ ಸಾವಿಗೂ ಸಂಬಂಧವೇನು ಅಂತ ತಿಳಿಯಬೇಕಾದರೆ ಈ ಗ್ರಂಥವನ್ನು ಮತ್ತೆ ಮತ್ತೆ ಓದಬೇಕು. ಅಥವಾ ಕಾಲೇಜುಗಳಲ್ಲಿ ಪಠ್ಯ ಪುಸ್ತಕವಾಗಿರಿಸಿ ಪರೀಕ್ಷೆಯಲ್ಲಿ ಅಂತಹ ಒಂದು ಪ್ರಶ್ನೆಯನ್ನು ಕೇಳಬೇಕು. "ನನ್ನ ವಾಚಕರು ಈ ಗ್ರಂಥವನ್ನು ಒಮ್ಮೆ ಓದಿ ಕೂಡಲೇ ಮರೆತರೆ ನನಗೆ ಸಂತೋಷ" ಎಂದು ಶ್ರೀರಂಗರು "ಕಿವಿಮಾತ"ನ್ನು ಉಸುರಿರುವರು. ಆದರೆ, ಒಮ್ಮೆ ಓದಿದ ತ್ರಾಸವನ್ನು ಮರೆಯುವುದು ಹೇಗೆ ?

"ಭರಮಪ್ಪನ ಭೂತ"ವನ್ನು ಒಂದು ರಹಸ್ಯಾತ್ಮಕ ಕಾದಂಬರಿ ಎಂದು ಸಂಪಾದಕರು ಕರೆದಿರುವರು. ಅದರಲ್ಲಿ ಅಡಗಿರುವ ರಹಸ್ಯವೇನೆಂದರೆ, ಒಂದು ನೀತಿ; ನಮ್ಮ ಹಿರಿಯರೂ ತಾತ ಮುತ್ತಾತಂದಿರೂ ಹರಿಕಥಾ ದಾಸರೂ ಶತಮಾನಗಳಿಂದಲೂ ಸಾರಿರುವ ಒಂದು ಸಾಮಾನ್ಯ ನೀತಿ. ಈ ದೃಷ್ಟಿಯಿಂದ ಅದನ್ನು ಒಂದು **ನೀತಿಗ್ರಂಥ** ಎಂದು ಕರೆಯುವುದೇ ಸಮರ್ಪಕವಾಗಿದೆ. ತಮ್ಮ ಈ ಗ್ರಂಥದ ಮೂಲತತ್ವವನ್ನು ಶ್ರೀರಂಗರು ಬಹಳ ಚಮತ್ಕಾರದಿಂದ ಕೇವಲ "ಕೈಗೂಲಿ ಕುಂಭಕರ್ಣ"ನಾದರೂ ಸುಪ್ರಸಿದ್ಧ ಪಾಶ್ಚಾತ್ಯ ವೈಜ್ಞಾನಿಕರಾದ ಸರ್. ಆಲಿವರ್ ಲಾಜ್, ಎ ಕಾನನ್ ಡೋಯಿಲ್ ಮುಂತಾದವರ ಭೂತಸಂಶೋಧನೆಗಳ ಅರಿವಿರುವ ಮೇಧಾವಿಯಾದ, ತಿರುಪೆ ತಿಮ್ಮಪ್ಪ, ಭರಮಪ್ಪನ ಬಾಯಿಂದ ಬೀಳಿಸಿದಾರೆ. "ಕೆಟ್ಟ ಕೆಲಸದಕ್ಕೋದಿಲ್ಲರಿ, ಯಪ" ಎಂಬುದೇ ಆ ಮಹಾವಾಕ್ಯ. ಈ ತತ್ವವನ್ನು ಮನಗಾಣದ ಮಾನವಾಸುರರ ಹಾವಳಿಯಿಂದ ನರಳುತ್ತಿರುವ ಈ ವಿಷಮ ಪರಿಸ್ಥಿತಿಯಲ್ಲಿ "ಭರಮಪ್ಪನ ಭೂತ"ವು ಪ್ರತಿ ಬಾಲಕಬಾಲಕಿಯರ ಬಳಿಯಲ್ಲೂ ಇದ್ದರೆ ಒಳ್ಳೆತಲ್ಲವೆ ?

ಅಲ್ಲದೆ, ಈ ಗ್ರಂಥ ಒಂದು ಹೊಸತರಹದ ಹಾಸ್ಯಶೈಲಿಯನ್ನೊಳಗೊಂಡಿದೆ. "ಒಂದು ಕಣ್ಣೆ ವೆ ಹಾರುವುದು" (ಪುಟ ೨) ಕೂದಲುದುರುವಂತೆ ತಲೆಯನ್ನು ಜಾಡಿಸುವುದು(ಪುಟ ೮೮) ಬಸುರಿಯ ದೇಹದಲ್ಲಿ ಮಗು ರಕ್ತದಲ್ಲಿ ಸಮರಸವಾಗಿ ಹರಿದಾಡುವುದು(ಪುಟ ೯೭) ಬಾಯಿಯನ್ನು ತೆರೆದು ಸಿದ್ಧ ಮಾಡಿಕೊಂಡು ಅನಂತರ ಚೀರುವುದು (ಪುಟ ೧೧೭) ನಾಯಿಯ ಬಾಲದಂತೆ ಗೊತ್ತಿಲ್ಲದಿದ್ದರೂ ಗೊತ್ತಿದೆ ಎಂದು ಸಾಧಿಸುವುದು (ಪುಟ ೮೧) ಎಂಬಿವೇ ಮುಂತಾದ ಚಿತ್ರಗಳು ನಮ್ಮನ್ನು ನಗಿಸದೆ ಬಿಡವು.

ಈ ಗ್ರಂಥದಲ್ಲಿರುವ ಹಾಸ್ಯದ ಚಟಾಕಿಗಳೂ ಬಹು ಅರ್ಥಗರ್ಭಿತವಾಗಿವೆ. ಉದಾಹರಣೆಗೆ ಒಂದು ಚಟಾಕಿ ಸಾಕು: "ಯಾವುದಕ್ಕೂ ನಿನಗೆ ಬೇಕು ಭವ್ಯದಆಸ! ಅದಕಂತೆ ನಿನಗ ಭವಾನಿ ಅಂತ ಹೆಸರು ಬಿದ್ದದ್ದು!" ಹೇಗಿದೆ?

## ಓದುಗರಿಗೆ ಒಂದು ಒರೆಗಲ್ಲು

ಯಾರು ಯಾರು ಎಷ್ಟೆಷ್ಟು ಹೇಡಿಗಳು ಎಂದು ಅಳತೆ ಮಾಡಿ ಖಚಿತವಾಗಿ ತಿಳಿದುಕೊಳ್ಳಲು ಶ್ರೀ ರಂಗರು ಈ ಗ್ರಂಥದಲ್ಲಿ ಕೊಟ್ಟಿರುವ ಅಮೋಘವಾದ ಸಲಹೆ ತುಂಬಾ ಸಮಯೋಚಿತವಾಗಿದೆ. ಸೈನ್ಯಗಳಿಗೆ ಯೋಧರನ್ನು ಸೇರಿಸಿಕೊಳ್ಳುವಾಗ ಶ್ರೀರಂಗರ ಈ ಹೊಸಕ್ರಮವನ್ನು ಧಾರಾಳವಾಗಿ ಅನುಸರಿಸಬಹುದಾಗಿದೆ. ವಾಚಕರ ಅವಗಾಹನಕ್ಕಾಗಿ ಆ ಕ್ರಮವನ್ನು ಹೀಗೆ ವಿವರಿಸಬಹುದು. ಆತನ ಹಿಂದೆ ಹೋಗಿ ನಿಂತು ಒಮ್ಮೆಲೆ **ಹುತ್** ಎಂದು ಕೂಗುವುದು; ಆಗ ಆತ ಎಷ್ಟುದೂರ ಮುಂದಕ್ಕೆ ಓಡುತ್ತಾನೆ ಎಂಬುದನ್ನು ಅಳತೆಮಾಡಿಟ್ಟುಕೊಳ್ಳುವುದು. ಇನ್ನೊಬ್ಬ ಅವನಿಗಿಂತ ಎರಡರಷ್ಟು ಓಡಿದರೆ ಅವನು ಮೊದಲಿನವನಿಗಿಂತ ಎರಡರಷ್ಟು ಹೇಡಿ. ಹೆಚ್ಚು ವಿವರಗಳಿಗೆ ಗ್ರಂಥವನ್ನೇ ಓದಿ.

—**ನಾ. ಕ.**

---

ಬೀಗರು ಬೀಗರೇ ಒಂದು,
ಬೀಗರನ್ನು ಕೂಡಿಸಿದ ಪುರೋಹಿತನೇ ಒಂದು.

*　　*　　*

ಅಳಿಯನಿಗೆ ಅಧಿಕಾರ ಸಿಕ್ಕರೆ,
ಅತ್ತೆ ಅಟ್ಟಕ್ಕೆ ಹೋದಳು.

*　　*　　*

ಮದುವೆಕಾಲ ಬಂದರೆ ಸರಿ,
ಮಾರ್ವಾಡಿ ಮೆರೆದದ್ದೂ ಮೆರೆದದ್ದೆ.

*　　*　　*

ಸಾಲಂಕೃತ ಕನ್ಯಾದಾನ ಮಾಡಿದರೆ,
ಸಾಲ ಕೊಟ್ಟ ಶೆಟ್ಟಿ ಸುಮ್ಮನಿರುತ್ತಾನೆಯೇ ?

*　　*　　*

ಮದುವೆಗೆ ಬಂದ ಬಡ ಬೀಗಿತ್ತಿಗೆ,
ಇಜ್ಜೋಡಿ ಮಕ್ಕಳು.

# ಅವಳ ಮೇಲೆ ಪ್ರೀತಿ

ಉಪನಿಷತ್ತುಗಳೇನೆ ಎನ್ನಲಿ,
ನನಗೇನೋ ಹೊನ್ನಿನ ಆಸೆ,
ಚಿನ್ನ ಎಂಬೋದು ನನಗಿದ್ದಿದ್ದರೆ,
ಎಲ್ಲಾ ಅವಳ ಕೈಲೇ ಇಡತಾಇದ್ದೆ.
ನನಗಷ್ಟು ಆಸೆ ಎಂದಲ್ಲ,
ಅವಳ ಮೇಲೆ ನನಗಷ್ಟು ಪ್ರೀತಿ!

ಹಾಡೋದಕ್ಕೊಂದು ಬಂದಿದ್ದರೆ,
ಅರಮನೆ ಸಂಗೀತಗಾರನಾಗಿದ್ದರೆ,
ನನ್ನ ತಂಬೂರಿ ತಬಲ ಮೇಲೆಲ್ಲಾ,
ಅವಳ ಅಂಕಿತಾನೇ ಇಡತಾಯಿದ್ದೆ,
ನನಗಷ್ಟು ಆಸೆ ಎಂದಲ್ಲ:
ಅವಳ ಮೇಲೆ ನನಗಷ್ಟು ಪ್ರೀತಿ!

ದೇವರು ನನಗೊಂದು ರಾಜ್ಯ ಕೊಡೋಕಿದ್ದರೆ,
ತಲೇ ಮೇಲೆ ಕಿರೀಟ ಇಡೋಕಿದ್ದರೆ,
ನನಗದು ಬ್ಯಾಡ, ಅವಳ ತಲೇ ಮೇಲೇ
ರನ್ನದ ಕಿರೀಟ ಇಡತಾಯಿದ್ದೆ.
ನನಗಷ್ಟು ಆಸೆ ಎಂದಲ್ಲ;
ಅವಳ ಮೇಲೆ ನನಗಷ್ಟು ಪ್ರೀತಿ!

ಸಾಕಪ್ಪ, ನನಗೇನೂ ಬೇಕಿಲ್ಲ,
ಎಲ್ಲಾ 'ಬೇಕು'ಗಳೂ ನನಗವಳೇ!
ಹೊನ್ನುಗಿನ್ನು ಯಾವುದೂ ನನಗಿಲ್ಲ,
ದೈವಕ್ಕೊಂದು ದೊಡ್ಡ ನಮಸ್ಕಾರ!
'ಅವಳು' ಎಂಬೋದೇ ನನಗಿಲ್ಲ,
ಅವಳ ಮೇಲೆ ನನಗಷ್ಟು ಪ್ರೀತಿ!

**ಎಂ. ಜಿ. ವೆಂ**

# "ಗಾಳಿಯಲ್ಲ್ಹೋಗುವ ಮಾರಿ"

'ಏನೋ ರಾಮು, ಮೂರುದಿನ ದಿಂದ ಜಗ್ಗು ಪತ್ತೆಯೇ ಇಲ್ಲ'

'ನಾವು ಪಾರ್ಕಿನಲ್ಲಿದ್ದರೆ ಅವನು ಸಿನಿಮಾ ಮಂದಿರದ ಗೋಡೆಮೇಲೆ ಸಂಗೀತ ಕೇಳ್ತಾ ಕೂತಿರ್‍ತಾನೆ.'

'ನೆನ್ನೆ ಅಲ್ಲಿಗೂ ಹೋಗಿದ್ದೆವಲ್ಲೊ ಅಲ್ಲೂ ಇತ್ತಿಲ್ಲ.'

'ಅಂದಮೇಲೆ ಮಾರ್ಕೆಟ್ಟಿನ ಹತ್ತಿರ ಹಳೇ ಪುಸ್ತಕದ ಅಂಗಡಿಯಲ್ಲಿ ಪುಸ್ತಕ ಹುಡುಕುತ್ತಾ ಇರುತ್ತಾನೆ.'

'ಅವನ ಹತ್ತಿರ ದುಡ್ಡೇ ಇತ್ತಿಲ್ಲ ವಲ್ಲೊ.'

'ಮತ್ತೆ ಇನ್ನೆಲ್ಲಿಗೆ ಹೋಗುತ್ತಾನೊ ಸಾಯಂಕಾಲದ ಹೊತ್ತು.'

'ಅದಕ್ಕೆ ನಿನ್ನ ಕೇಳಿದ್ದು.'

'ಏನಾದರೂ ಖಾಯಿಲೆ ಗೀಯಿಲೇನೊ.'

'ಅದಾದರೆ ತಕ್ಷಣ ಹೇಳಿ ಕಳಿಸುತ್ತಿದ್ದ. ಖಾಯಿಲೆ ಬಂದರೆ ನಮ್ಮ ಕೈಲೆಲ್ಲಾ ಜವಾನ್ಕೆಲಸ ಮಾಡಿಸಲೇಬೇಕಲ್ಲ ಅವನು.'

'ಅಂದಮೇಲೆ ಅವನ ಹೆಂಡತಿ ಮಕ್ಕಳು ಊರಿಗೆ ಹೋಗಿದ್ದಾರೇನೊ,ಒಬ್ಬನೇ ಆದ್ದರಿಂದ ಮನೆಯಲ್ಲೇ ಇದ್ದಾನೇನೊ.'

'ಯಾಕೆ, ಹೆಂಡತಿ ಮಕ್ಕಳಿಲ್ಲದೇ ಇದ್ದರೆ ಮನೇಲಿ ಸುಖವಾಗಿ ಗಲಾಟೆ ಇಲ್ಲದೆ ಇರಬಹುದು ಅಂತಲೇ.'

'ಹು, ಹಾಗೆಯೇ ಇಟ್ಟುಕೊ.'

'ಹಾಗಾದರೆ ಅವನ ಮನೆಗೆ ಹೋಗೋಣ ಬಾ.'

'ಸರಿ ನಡಿ.'

ಅಂತೇ ರಾಮು ಶಾಮು ಇಬ್ಬರೂ ಜಗ್ಗುವಿನ ಮನೆಯ ಕಡೆಗೆ ಸಾಯಂಕಾಲ ಆರು ಗಂಟೆ ಹೊತ್ತಿಗೆ ಹೊರಟರು. ಸಾಮಾನ್ಯವಾಗಿ ಮೂರು ಜನವೂ ಕಛೇರಿ ಮುಗಿಸಿದಮೇಲೆ ಒಟ್ಟಿಗೇ ಅಲ್ಲಲ್ಲೇ ಸುತ್ತಾಡುತ್ತಾ ಹರಟೆ ಹೊಡೆಯುತ್ತಾ ಕಾಲಕಳೆಯುತ್ತಿದ್ದರು. ಮೂರು ದಿನಗಳಿಂದ ಜಗ್ಗು ಗೈರುಹಾಜರು. ಹಾಗಾಗಿ ಅವನ ಮನೆಗೆ ಇವರಿಬ್ಬರೂ ಹೊರಟರು.

ಜಗ್ಗುವಿನ ಮನೆ ಬಾಗಿಲಿಗೆ ಹೋದರೆ ಮನೆಯಲ್ಲಿ ಮುಸುಕು ಮುಸುಕಾಗಿ ಕಾಣುವ ಘೋಷಾ ದೀಪ. "ಜಗ್ಗು ಜಗ್ಗು" ಎಂದು ಕೂಗಿದರು. 'ಯಾರೊ ಅದು ಒಳಗೆ ಬನ್ನಿ' ಎಂಬ ಮಾರ್ದನಿಯು ಒಳಗಿನಿಂದ ಬಂತು. ಇಬ್ಬರೂ ಒಳಗೆ ಹೋದರು.

ಇನ್ನು ಮುಂದೆ ರಾಮುವು ಕತೆ ಹೇಳುತ್ತಾನೆ ಕೇಳಿ.

ಇಬ್ಬರೂ ಒಳಗೆ ಹೋದೆವು. ಜಗ್ಗುವು ಒಂದು ರೇಡಿಯೋ ಎದುರಿಗೆ ಕೂತುಕೊಂಡಿದ್ದಾನೆ. ಬಲಗಡೆ ತೊಡೆಯ ಮೇಲೆ ಆಕಾಶವಾಣಿ ಪತ್ರಿಕೆ ಎಡಗೈ

ಬೆರಳುಗಳಿಂದ ರೇಡಿಯೊ ತಿರುಪನ್ನು ಹಿಡಿದಿದ್ದಾನೆ. ನೆಟ್ಟ ದೃಷ್ಟಿ, ಏಕಾಗ್ರ ಚಿತ್ತ. ಮುಖ್ಯ ಮಂಕು ಹಿಡಿದಂತೆ ಕೂತಿದ್ದಾನೆ. ನಾವು ಬಂದಿದ್ದು ಅವ ನಿಗೆ ಪೂರ್ತಿ ಮನವಟ್ಟಿದಂತೆ ಕಾಣಲಿಲ್ಲ. ಅಷ್ಟರಲ್ಲೇ ಒಂದು ಹಿಂದೂಸ್ಥಾನೀ ಮಟ್ಟಿನ ಹಾಡು ಕೇಳಿಬಂತು. ಬಲು ಚೆನ್ನಾಗಿದೆ ಎನ್ನುವುದರೊಳಗೇ ಅದನ್ನು ತಿರುಗಿಸಿದ್ದ. ಯಾವುದೊ ಅವಾಚ್ಯ ಭಾಷೆ ಯಲ್ಲಿ ಯಾರೊ ಮಾತನಾಡುತ್ತಿದ್ದರು. 'ಇದು ಏನುಗೊತ್ತೇ' ಎಂದು ಹೇಳಿದ, 'ಗೊತ್ತಿಲ್ಲ' ಎಂದು ಉತ್ತರಕೊಟ್ಟೆ. 'ಜರ್ಮನಿ' ಎಂದು ಗಂಭೀರವಾಗಿ ಹೇಳಿದ. 'ನಿನಗೆ ಜರ್ಮನಿ ಭಾಷೆ ಗೊತ್ತೆ ಎಂದು ಕೇಳಿದೆವು.' ಇಲ್ಲ ಆದರೆ ಈ ಹೊತ್ತಿನಲ್ಲಿ ಜರ್ಮನಿ ಸುದ್ದಿ ಎಂದು ತಿಳಿಸಿದ. ಅದನ್ನು ಮುಂದಕ್ಕೆ ತಿರುಗಿಸಿದ. ಇನ್ನು ಯಾರೊ ಹಾಡುತ್ತಿದ್ದರು. ಮೊಹರಮ್ಮಿನ ಹಬ್ಬದಲ್ಲಿ ಸಾವೇರಿ ರಾಗದಲ್ಲಿ ಬ್ಯಾಂಡು ಬಾರಿಸಿದಂತೆ ಈ ಸಂಗೀತ, ನಮ್ಮ ಕಡೆಗೆ ನೋಡಿದ. ನಾವಿಬ್ಬರೂ ನಿರಪರಾಧಿಗಳಂತೆ ಸುಮ್ಮನಿದ್ದೆವು. 'ಬಟೂವಿಯಾ' ಎಂದು ಒಂದು ಮಾತಿನಲ್ಲಿ ನಮ್ಮ ಅಜ್ಞಾನವನ್ನು ಹೊರಗೆಡವಿದ. ನನಗೇಕೊ ಇದು ಕೊರಗನ್ನುಂಟು ಮಾಡಿತು. ಇಷ್ಟು ದಿನಗಳೂ ಯಾವ ವಿಚಾರ ಮಾತನಾಡಿದರೂ ಅವನಂದ ಮಾತಿಗೆ ಏನಾದರೂ ಜವಾಬುಕೊಟ್ಟು ನಾವೂ ಜಯಿಸುತ್ತಿದ್ದೆವು. ಈವತ್ತು ಅವನೇ ರಾಜನಾಗಿಬಿಟ್ಟಿದ್ದ. ಅವನಾಡಿದ್ದೇ ಮಾತು: ಹೇಳಿದ್ದೆಲ್ಲಾ ಸತ್ಯ, ಹೀಗಾಗಿತ್ತು. ಇದಕ್ಕೇನಾದರೂ ಉಪಾಯ ಮಾಡಲೇಬೇಕು ಎಂದು ನಿಶ್ಚಯಿಸಿದೆ ಮೆಲ್ಲಗೆ ಶಾಮುವಿಗೆ ಕಣ್ಸನ್ನೆ ಮಾಡಿದೆ.

ಆ ವೇಳೆಗೆ ಹಾವಾಡಿಗರು ಹಾಡೋ ಹಾಗೆ ಸಂಗೀತ ಕೇಳಿಬಂತು 'ಜಾವಾ' ಎಂದು ಜಗ್ಗು ಉಸುರಿದ "ಅಲ್ಲಾ ಷೈಗಾನ್" ಎಂದೆ. ಥಟಕ್ಕನೆ ಹೀಗೆ ಹೇಳಿದ್ದು ಕೆಲವು ನಿಮಿಷ ಜಗ್ಗುವನ್ನು ಅವಾಕ್ಕಾಗಿಸಿತು. ಆದರೆ ಕೂಡಲೆ ಚೇತರಿಸಿಕೊಂಡು "ಇದು ಜಾವಾನೇ. ಈ ವೇವ್ ಲೆಂಗ್ತಿನಲ್ಲಿ ಜಾವಾನೇ ಸಿಗೋದು"ಎಂದು ಹೇಳಿದ.

'ಛೇ, ಮೊನ್ನೆ ಮೊದಲನೇ ತಾರೀಖಿನಿಂದ ಷೈಗಾನ್ ಕೂಡ ಆ ವೇವ್ ಲೆಂಗ್ತಿನಲ್ಲೇ ಹೊಡೆದು ಕೊಳ್ಳುತ್ತೆ' ಎಂದೆ.

'ಹೌದು ಹೌದು ನನಗೂ ಎಲ್ಲೋ ಪತ್ರಿಕೆಗಳಲ್ಲಿ ಓದಿದ ಜ್ಞಾಪಕ. ಜಪಾನರ ಆಕ್ರಮಣವಾದ ಮೇಲೆ ಹೀಗೆ ವ್ಯತ್ಯಾಸ ಮಾಡಿದರು. ಅದೊಂದು ಯುದ್ಧ ಕ್ರಮ' ಎಂದು ಶಾಮು ನನಗೆ ಬೆಂಬಲವಿತ್ತ.

'ಇರಬಹುದು ನನಗೆ ಗೊತ್ತಿತ್ತಿಲ್ಲ' ಎಂದು ಜಗ್ಗು ಒಪ್ಪಿಕೊಂಡ.

ನಮ್ಮಿಬ್ಬರಿಗೂ ಇವನ ಕುಂದು ಗೊತ್ತಾಯಿತು. ಸರಿ ಆ ಮೇಲೆ ಅವನು ಹೇಳಿದ್ದಕ್ಕೆ ವ್ಯತಿರಿಕ್ತ. ಪತ್ರಿಕೆಗಳಲ್ಲಿ ಬಂದಿತ್ತು ಎಂಬುದೇ ನಮ್ಮ ಗಾಂಡೀವ. ಅಂತಾಗಿ ಕೊನೆಗೆ ಅವನು ರೇಡಿಯೋನ ನಿಲ್ಲಿಸಿಯೇ ಬಿಟ್ಟ. ಬರೀ ಮಾತಿಗೆ ಕುಳಿತ.

## "ಗಾಳಿಯಲ್ಲೋಗುವ ಮಾರಿ"

'ಇದೇನೋ ಮೂರುದಿನಗಳಿಂದ ಕಾಣಿಸಲೇ ಇಲ್ಲವಲ್ಲೊ.'

'ರೇಡಿಯೋ ಇಟ್ಟುಕೊಂಡು ಸುದ್ದಿ ಕೇಳುತ್ತಿದ್ದೆ,

ಒಂದು ಸುದ್ದಿಯನ್ನಾದರೂ ಒಂದು ನಿಮಿಷದ ಮೇಲೆ ಕೇಳಲಿಲ್ಲ!'

ಚೆನ್ನಾಗಿದ್ದರೆ ಕೇಳುತ್ತಿದ್ದೆ ಯಾವ ಯಾವ ಊರುಗಳು ಸಿಗುತ್ತೆ ನೋಡೋಣ ಎಂದು ಹುಡುಕುತ್ತಿದ್ದೆ'

'ಬೇಜಾರಾಗುಲ್ಲವೇನೋ'

'ಯಾಕೋ ಬೇಜಾರು. ದಿನವೆಲ್ಲಾ ಇದರೆದುರಿಗೆ ಕಳೆಯಬಹುದು,

'ಕೊಂಡು ಕೊಂಡೆಯೇನೋ, ದುಡ್ಡೆಲ್ಲಿತ್ತೋ'

'ಕೊಂಡುಕೊಳ್ಳುಕ್ಕೆ ದುಡ್ಡೆಲ್ಲೋ. ನನ್ನ ನೆರೆಯುವರು ಊರಿಗೆ ಹೋದರು. ನೀವಿಟ್ಟುಕೊಂಡಿರಿ ಒಂದುವಾರ ಎಂದರು ಆದರೊಳಗೆ ಇದರ ಮರ್ಮವನ್ನೆಲ್ಲಾ ತಿಳಿದುಕೊಂಡು ಬಿಡೋಣ ಎಂದು ಅಭ್ಯಾಸ ಮಾಡುತ್ತಿದ್ದೆ'

'ಹೆಂಡತಿ ಮಕ್ಕಳ್ಯಾರೂ ಮನೆಯಲ್ಲಿದ್ದಂತೆ ಕಾಣಿಸಲಿಲ್ಲ ಎಲ್ಲಿಹೋಗಿದ್ದಾರೆ'

'ಇದು ತಂದ ಮಾರನೆಯ ದಿನ ತೌರು ಮನೆಗೆ ಹೋಗಿ ಬರುತ್ತೇವೆ. ನೀವು ರೇಡಿಯೋ ವಾಪಸು ಕೊಡುವ ತನಕ ಬರುವುದಿಲ್ಲ ಎಂದು ಹೇಳಿ ಹೊರಟು ಹೋದರು'

'ಆದರೂ ವಾಪಸು ಕೊಡಲಿಲ್ಲವೇ'

'ಅಯ್ಯೋ ಮಂಕೆ, ಎಷ್ಟೋ ದಿನಗಳಿಂದ ಹೆಂಡತಿಯನ್ನು ಊರಿಗೆ ಹೋಗೇ ಎಂದರೆ ಬೇಡ ಎನ್ನುತ್ತಾ ನನ್ನನ್ನು ಕಾಡುತ್ತಿದ್ದವಳು ಇಷ್ಟು ಸುಲಭವಾಗಿ ಹೋಗುವುದನ್ನು ಕಂಡು ಇನ್ನು ಮೇಲೆ ಬೇಜಾರಾದಾಗ, ಏನಾದರೂ ಓದಿ ಬರಿಯ ಬೇಕಾದಾಗ, ಈ ರೇಡಿಯೋ ತಂದಿಟ್ಟುಕೊಂಡರೆ ಕಾರ್ಯಸಾಧನೆ ಆಗುತ್ತಲ್ಲವೇ'

'ಇಷ್ಟು ಸಣ್ಣವಿಚಾರಕ್ಕೆ ಈ ಗಾಳಿಯಲ್ಹೋಗುವ ಮಾರಿಯನ್ನು ಮನೆಗೆ ಹಿಡಿದು ಕೊಂಡು ಬರುವುದೇ'

'ನಿನಗೇನು ಗೊತ್ತು ಮದುವೆ ಇಲ್ಲದವ ನೀನು ಗಾಳಿಯಲ್ಹೋಗುವ ಮಾರಿ, ಎಷ್ಟೋವೇಳೆ ಮನೆಮಾರಿಗಿಂತ ಒಳ್ಳೆಯದು. ಕೀಲು ತಿರಿಗಿಸಿದರೆ ಬಾಯಿ ಮುಚ್ಚಿ ಕೊಳ್ಳುತ್ತಾಳೆ. ಮನೆಮಾರಿ ಹಾಗೆ ಮಾಡುತ್ತಾಳೆಯೇ' ಎಂದು ಹೇಳಿದ.

ಈ ಕಾರಣ ಯಾಕೊ ಸಮಂಜಸವಾಗಿ ಕಾಣಿಸಿತು. ರಾಮು ಕೂಡ ಬಂದು ರೇಡಿಯೋ ಕೊಡುವ ಮಾವ ಸಿಕ್ಕಿದರೆ ಮದುವೆ ಮಾಡಿಕೊಳ್ಳಬಹುದು ಎಂದು ಮನಸ್ಸುಮಾಡಿದಂತೆ ಅವನ ಮಾತುಕತೆಗಳಿಂದ ಕಾಣಬರುತ್ತಿತ್ತು.

---

ನ್ಯಾಯವಿಧಾಯಕ ಸಭಾಧ್ಯಕ್ಷರು ಹೆಹಲಿಯಿಂದ ನಮ್ಮೂರಿಗೆ ಹಿಂತಿರುಗಿದರು.

—ಸಭಾಂಗಣದ ಬಾಗಿಲುಗಳನ್ನು-ಪಂಗಡ ಪಂಗಡದವರು ಒಮ್ಮೆಲೇ ಹೊರಗೆ ಹೋಗಲು ಸಾಧ್ಯವಾಗುವಂತೆ ಸಭಾಂಗಣದ ಬಾಗಿಲನ್ನು ದೊಡ್ಡದು ಮಾಡಿಸುತ್ತಾರೆಂಬುದು ಸುಳ್ಳು.

# ನೀತಿಯ ಕತೆಗಳು-ಬಲಿತವರಿಗೆ—



ಒಂದಾನೊಂದು ಊರಿನಲ್ಲಿ ಒಬ್ಬಾನೊಬ್ಬ ಲೇಖಕನಿದ್ದನು. ಆತನು ಬರೆದ ಮೊದಲಾಮೊದಲ ಗ್ರಂಥವು ಜನರ ಪ್ರೀತ್ಯಾದರಗಳಿಗೆ ಪಾತ್ರವಾಯಿತು. ಅಂತೇ ಸಾವಿರಾರು ಪ್ರತಿಗಳು ಮಾರಾಟವಾದುವು. ಪ್ರಕಟನ ಮಾಡಿದ ಪ್ರಕಾಶಕನು ಗ್ರಂಥಕರ್ತನೊಂದಿಗೆ ಒಂದು ಒಪ್ಪಂದ ಮಾಡಿಕೊಂಡು ಇನ್ನುಮುಂದೆ ಗ್ರಂಥ ಕರ್ತನು ಬರೆಯುವ ಮೂರು ಗ್ರಂಥಗಳನ್ನೂ ತಾನೇ ಪ್ರಚುರಪಡಿಸಲು ಹಕ್ಕು ಪಡೆದನು.

ಮೊದಲನೆಯ ಗ್ರಂಥವು ಇಷ್ಟು ಚೆನ್ನಾಗಿ ವ್ಯಾಪಾರವಾದುದನ್ನು ನೋಡಿ ಲೇಖಕನಿಗೆ ಆಸೆಯಾಯಿತು. ಇನ್ನುಮುಂದೆ ನನ್ನ ಪುಸ್ತುಕಗಳಿಗೆ ಶೇಕಡ ೨೫ರಂತೆ ಹಣ ಕೊಡಬೇಕೆಂದನು. ಪ್ರಕಾಶಕನು ಒಪ್ಪಂದದ ಪ್ರಕಾರ ಶೇಕಡಾ ೧೦ರಂತೆ ಮಾತ್ರ ಹಣ ಕೊಡುತ್ತೇನೆ ಎಂದನು. ಗ್ರಂಥಕರ್ತನಿಗೆ ಇಷ್ಟವಿಲ್ಲದಿದ್ದರೂ ಒಪ್ಪಂ ದಕ್ಕೆ ಒಪ್ಪಲೇಬೇಕಾಯಿತು. ಏನಾದರೂಮಾಡಿ ಒಪ್ಪಂದ ಮುರಿಯುವಂತೆ ಮಾಡ ಬೇಕೆಂದು ಯತ್ನ ಪಟ್ಟನು.

ಕಡೆಗೆ ಒಂದು ಯೋಚನೆ ಹೊಳೆಯಿತು. ಅಸಂಭವವಾದ ಅನೈತಿಕ ಕಾದಂಬರಿ ಯೊಂದನ್ನು ಬರೆದು ಪ್ರಕಾಶಮಾಡಲು ಕೊಡುವುದು. ಅದರ ನಷ್ಟವನ್ನು ನೋಡಿ ಪ್ರಕಾಶಕನು ಒಪ್ಪಂದ ಹರಿದು ಹಾಕುವನು, ಎಂದುಕೊಂಡನು. ಇದರಂತೆ ಒಂದು ಕಾದಂಬರಿ ಬರೆದನು. ಕವಿಯು ಕೂಡ ಊಹಿಸಲಾರದಂತಹ ಸನ್ನಿವೇಶಗಳು, ಕೇವಲ ಅನಾಗರೀಕ ಕಥಾವಸ್ತು. ಪಾತ್ರ ನಿರ್ಮಾಣವು ಬಲು ಹೀನ. ಈ ಪುಸ್ತ ಕದ ಹಸ್ತ ಪ್ರತಿಯು ಪ್ರಕಾಶಕನಿಗೆ ಕಳುಹಿಸಲ್ಪಟ್ಟಿತು.

ಪುಸ್ತುಕವೂ ಪ್ರಚುರವಾಯಿತು. ಜಾಹೀರಾತುಗಳೂ ಹೊರಬಿದ್ದುವು. ವಿಮರ್ಶೆ ಗಳೂ ಅಚ್ಚುಗಂಡವು. ಮೊದಲ ಪುಸ್ತುಕಕ್ಕಿಂತ ನೂರರಷ್ಟು ಈ ಕಾದಂಬರಿಯು ಮಾರಾಟವಾಯಿತು.

ಆಗರಿತನು ಕಾದಂಬರಿಕಾರನು — ಪುಸ್ತುಕದ ಮಹಿಮೆಯು ಜಾಹೀರಾತಿ ನಲ್ಲಿಂದು—ಪುಸ್ತುಕದ ಸೊಬಗು ವ್ಯಂಗ್ಯತನದಲ್ಲಿಂದು, ವಿಮರ್ಶೆಯ ಕ್ರೂರ ವಚನ ಗಳು ವ್ಯಾಪಾರಕ್ಕೆ ಸಹಾಯವೆಂದು. ಅನೈತಿಕ ವಿಷಯಗಳು ಅಭಿನಂದನೀಯ ವೆಂದು.

ಈಗ ಪ್ರಚಾರಕನೂ ಕಾದಂಬರಿಕಾರನೂ ಪರಮಮಿತ್ರರು. ಇವರಿಬ್ಬರೂ ಒಟ್ಟಿಗೆ ವಾಸಮಾಡುತ್ತಿರುವರು. ತಾನು ಬರೆಯುವ ಸಕಲ ಪುಸ್ತುಕಗಳೂ ಈ ಪ್ರಚಾರಕನಿಗೇ ಮೀಸಲೆಂದು ಕಾದಂಬರಿಕಾರನು ಮನಸ್ಸು ಮಾಡಿರುವನು.

ನೀತಿಯು ಕತೆಗಳು-ಬಲಿತವರಿಗೆ—

ನೀತಿ—ತಾಳಿಯಾದರೇನು ಮಾಲೆಯಾದರೇನು
ಮದುವೆ ಆದದ್ದೆಲ್ಲಾ ಒಂದು.

---

## ಸಂಕಲ್ಪ

ನಾರಾಯಣಗೌಡರ ಕೋಣೆಯಲ್ಲಿ ಕತ್ತಲೆಯೂ ಬೆಳಕೂ ಒಟ್ಟಿಗೆ ಸಂಸಾರ ಮಾಡಿತ್ತು. ಏಕೆಂದರೆ ಬ್ಲಾಕ್ ಔಟ್ ದೆಸೆಯಿಂದ ಬಲ್ಬಿಗೆ ಮುಸುಕುಹಾಕಿತ್ತು. ಹೊರಗಡೆ ಮಳೆ ಜೋರು. ಆಗಾಗ ಕಣ್ಣು ಕೋರೈಸುವ ಮಿಂಚು; ಗಾಳಿಯ ಗೋಳಾಟ. ಯಾವುದೋ ನರಕಭೀತಿಗೆ ನರಳುತ್ತಿದ್ದಂತೆ ಮರಗಳೆಲ್ಲವೂ ಮೊರೆಯಿಡುತ್ತಿದ್ದುವು. ಕೋಣೆಯೊಳಗೆ ನಾಲ್ಕು ಜನರಿದ್ದರೂ ಭಯಂಕರ ಮೌನ! ಅವರು ಯಾರೂ ಐದು ನಿಮಿಷಗಳಿಂದ ಮಾತೇ ಆಡಿರಲಿಲ್ಲ. ಶಿರಸ್ತೇದಾರ್ ರಾಮಣ್ಣನವರು ಏನಾದರೂ ಅನ್ನುತ್ತಾರೆ ಎಂದು ಕಾದುಕಾದು ಬೇಸರಾಗಿ ಅವರೆಲ್ಲರೂ ಈಗ ಸಬ್ ರೆಜಿಸ್ಟ್ರಾರ್ ಷರೀಫ್‌ರ ಕಡೆ ತಿರುಗಿದ್ದರು. ಕವಲೊಡೆದ ಹಾದಿಯಲ್ಲಿ ಗೊತ್ತುಗುರಿಯಿಲ್ಲದೆ ತತ್ತರಿಸುವ ಚಂಚಲ ಚಿತ್ತದವರಂತೆ ಷರೀಫರು ಸಂಕಟಪಡುತ್ತಿದ್ದರು. ಅಂದವಾಗಿ ಬಾಚಿದ್ದ ಅವರ ಕೇಶಭಾರವು ಕೆದರಿಹೋಗಿತ್ತು. ಬಲಗೈಯಲ್ಲಿ ಹಿಡಿದಿದ್ದ ಸಿಗರೇಟಿನ ತುಂಡು ಆರಿ ತಂಗಳಾಗಿತ್ತು. ಷರೀಫರ ಕಡೆ ಉತ್ಸಾಹಾತುರಗಳಿಂದ ತಮ್ಮ ದೃಷ್ಟಿಗಳನ್ನು ಬೀರಿದ್ದ ಮೂರು ಜನರೂ ಪ್ರತಿಮೆಗಳಂತೆ ಕುಳಿತಿದ್ದರು. ಕಡೆಗೆ ನಾರಾಯಣಗೌಡರು ನಿಧಾನವಾಗಿ ಒಂದು ಸಿಗರೇಟನ್ನು ಆರಿಸಿ ಹೊತ್ತಿಸಿ ಹೊಗೆಯೆಳೆದು ಉಗಿದರು. ಬೇಕು, ಬೇಡ ಎಂಬ ಸಂದೇಹದಲ್ಲಿ ಓಲಾಡುತ್ತಾ ಶಿರಸ್ತೆದಾರರೂ ಕೂಡ ಕೊಂಚ ನಶ್ಯವನ್ನೆಳೆದರು. ಷರೀಫರು ದಿಗ್ಭ್ರಾಂತರಾಗಿ ಡಾಕ್ಟರ ಕಡೆ ನೋಡಿದರು. ಅಂತಹ ನೋಟವು ಡಾಕ್ಟರಿಗೆ ಅಷ್ಟು ಹೊಸದೇನೂ ಅಲ್ಲ. ಅದೇ ಕೋಣೆಯಲ್ಲೇ ಅದೇ ಮುಖದಲ್ಲೇ ಅವರು ಅದನ್ನು ಅನೇಕ ಬಾರಿ ಕಂಡಿದ್ದರು. ಆದ್ದರಿಂದ ಅವರು ಅತ್ತಕಡೆ ಗಮನಕೊಡದೆ ತನ್ನ ಕೈಯಲ್ಲಿದ್ದ ಕಾರ್ಡುಗಳನ್ನೇ ಪರೀಕ್ಷಿಸುತ್ತಾ ತೆಪ್ಪಗೆ ಕುಳಿತಿದ್ದರು. ಇದ್ದಕ್ಕಿದ್ದ ಹಾಗೆ ಸಬ್ ರೆಜಿಸ್ಟ್ರಾರ್‌ರವರಿಗೆ ಸ್ಫೂರ್ತಿ ಬಂತು. ವೀರಾವೇಶ ತುಂಬಿ ತುಳುಕಾಡಿತು. ಬಂದದ್ದೆಲ್ಲ ಬರಲಿ ಎಂಬ ಸಂಕಲ್ಪದಿಂದ ಅವರು ಕಟ್ಟಾಳಾಗಿ ನೆಟ್ಟಗೆ ಕುಳಿತರು. "ಡೈನಾಂಡ್!" ಎಂದು ಅವರು ಕೂಗಿದರು.

# "ದೂರ ದರ್ಶಿ"

ನಾವು ಮೂರೇ ಜನರು ರೈಲುಗಾಡಿಯಲ್ಲಿದ್ದೆವು. ನಾಲ್ವತ್ತು ವರುಷ ಮೀರಿದ, ಮಧ್ಯವಯಸ್ಸಿನ, ತಕ್ಕಮಟ್ಟಿಗೆ ಲಕ್ಷಣವಾಗಿ ಉಡುಪು ಧರಿಸಿದ, ನಾನೆಲ್ಲೋ ಒಮ್ಮೆ ನೋಡಿದ್ದವನೊಬ್ಬ, ಸುಂದರ ರೂಪಿನ ಯುವಕನೊಬ್ಬ. ನಾನೊಬ್ಬ.

ಯುವಕನು ನನ್ನ ಕಡೆಗೆ ನೋಡುತ್ತಾ 'ಸ್ವಾಮೀ ಗಂಟೆ ಎಷ್ಟು ದಯವಿಟ್ಟು ಹೇಳುವಿರಾ' ಎಂದು ಕೇಳಿದ.

'ಕ್ಷಮಿಸಬೇಕು ನನ್ನ ಗಡಿಯಾರ ನಿಂತುಹೋಗಿದೆ' ಎಂದೆ.

'ವಂದನೆಗಳು ಪರವಾಗಿಲ್ಲ'—ಎಂದು ಮಧ್ಯವಯಸ್ಸಿನವನ ಕಡೆಗೆ ತಿರುಗಿ 'ಸ್ವಾಮೀ, ಗಂಟೆ ಎಷ್ಟಾಗಿದೆ, ದಯವಿಟ್ಟು ಹೇಳಿ' ಎಂದ.

ಆತನು ಉತ್ತರ ಕೊಡಲಿಲ್ಲ. ತಾನೋದುತ್ತಿದ್ದ ಪತ್ರಿಕೆಯನ್ನು ಸ್ವಲ್ಪವೂ ತಗ್ಗಿಸಲಿಲ್ಲ. ಯುವಕನು ಕೆಂಪೇರಿ, ಬೆವರುತ್ತಾ, ಕಿಟಕಿಯಾಚೆಕಡೆ ನೋಡಲೆತ್ನಿಸಿದ. ಹಾಗೆಯೇ ಹತ್ತಾರು ಮೈಲಿಗಳು ಮಾತಿಲ್ಲದೆ ಪ್ರಯಾಣ ಮಾಡಿದೆವು.

ಮೊದಲ ಅವಮಾನವನ್ನು ಮರೆತು, ಮರಳಿ ಯುವಕನು ಆತನನ್ನು ಗಂಟೆ ಎಷ್ಟೆಂದು ಕೇಳಿದ. ಈ ಬಾರಿಯೂ ಉತ್ತರವು ಮೊದಲಸಾರಿಯಂತೆಯೇ. ಕೇವಲ ಅಲಕ್ಷ್ಯ. ಯುವಕನು ತಿರುಗಿ ಬಿರುಸಾಗಿ ಕೆಂಪೇರಿದ. ಬಿಸಿಯುಸಿರುಬಿಟ್ಟು ಕಿಟಕಿಯಾಚೆ ನೋಡತೊಡಗಿದ. ತಿರುಗಿ ಹತ್ತಾರು ಮೈಲಿಗಳು ನಿಶ್ಶಬ್ದ.

ಯುವಕನ ಮನಸ್ಸಿನಲ್ಲಿ ಏನೋ ಕಳವಳವಿದ್ದಿರಬೇಕು. ಜೇಬಿನಿಂದ ತನ್ನ ಟಿಕೇಟನ್ನು ತೆಗೆದು ನೋಡಿದ. ನಾನು ಹೋಗುತ್ತಿದ್ದ ಬಾಣಾವರಕ್ಕೆ ಅವನೂ ಪ್ರಯಾಣ ಮಾಡುತ್ತಿದ್ದ. ರೈಲು ಸರಿಯಾದ ಹೊತ್ತಿಗೆ ಬಾಣಾವರಕ್ಕೆ ಹೋಗುತ್ತದೆಯೊ ಎಂದು ಸಂದೇಹ ಪಡುತ್ತಿದ್ದವನಂತೆ ಕಾಣಿಸಿತು. ತಿರುಗಿ ಕೆಂಪೇರಿದ, ಈ ಬಾರಿ ಮೊದಲೇ ಕೆಂಪೇರಿ, ನಂತರ ಆತನ ಕಡೆಗೆ ಸ್ವಲ್ಪ ಬಾಗಿ 'ಸ್ವಾಮೀ. ನಿಮಗೆ ಇಷ್ಟು ಕಷ್ಟ ಕೊಡಬೇಕಾದರೂ ನನಗೆ ವೇಳೆಯು ತಿಳಿಯಲೇಬೇಕು, ದಯಮಾಡಿ ಹೊತ್ತೆಷ್ಟು ಹೇಳಿ' ಎಂದು ಕೇಳಿಕೊಂಡ.

ತೀವ್ರ ಅಲಕ್ಷ್ಯ. ಆತನು ನಿರುತ್ತರ.

ತನ್ನನ್ನು ಮಾತನಾಡಿಸಿದ್ದಾರೆಂಬುದೂ ಆತನಿಗೆ ತಿಳಿದಂತೆ ತೋರಲಿಲ್ಲ. ಯುವಕನು ಕೃತಕ ಕೆಮ್ಮನ್ನು ತೋರ್ಪಡಿಸಿ ಕಿಟಕಿಯಿಂದಾಚೆ ತಲೆಹಾಕಿ ಪ್ರಕೃತಿಯ ನಿಷ್ಠುರತೆಯನ್ನು ನೋಡತೊಡಗಿದ. ಸ್ವಲ್ಪಕಾಲ ಶಾಂತಿ. ಅನಂತರದಲ್ಲಿ ಆತನು ತನ್ನ ಪತ್ರಿಕೆಯನ್ನು ಕೆಳಗಿಟ್ಟು, ಕನ್ನಡಕವನ್ನು ಸರಿಮಾಡಿಕೊಂಡು, ನಶ್ಯವನ್ನು ಹಾಕಿ, ಯುವಕನನ್ನು ದುರುಗುಟ್ಟಿ ನೋಡುತ್ತಾ ಹೀಗಂದನು.

"ಅಯ್ಯಾ. ನೀನು ನನ್ನನ್ನು ಮೂರುಬಾರಿ ಗಂಟೆ ಎಷ್ಟೆಂದು ಕೇಳಿದೆ. ನಾನು ಉತ್ತರ ಕೊಡಲಿಲ್ಲ. ನಾನು ಕಿವುಡನೋ ಅಥವಾ ಮರ್ಯಾದೆ ಮಾನವಿಲ್ಲದ ಅನಾಗರಿಕನೊ ಎಂಬ ಅನುಮಾನವು ನಿನಗೆ ಬಂದಿರಬಹುದು. ವಾಸ್ತವವಾಗಿ ಇವೆರಡೂ ಅಲ್ಲ. ಆದರೆ ನಾನು ದೂರದರ್ಶಿ. ನಾನೇನಾದರೂ ನಿನಗೆ ಗಂಟೆ ಇಷ್ಟೆಂದು ಹೇಳಿದ್ದರೆ, ಹಾಗೆಯೇ ಮಾತು ಬೆಳೆದು ಬರುತ್ತಿತ್ತು. ಮಾತಿಗೆ ಮಾತು ಬಂದು 'ನೀವೆಲ್ಲಿಗೆ ಹೋಗುತ್ತೀರಿ' ಎಂದು ಕೇಳುತ್ತಿದ್ದೆ. 'ನಾನು ಬಾಣಾವರಕ್ಕೆ' ಎಂದರೆ, 'ನಾನೂ ಅಲ್ಲಿಗೇ ಹೋಗುತ್ತೇನೆ' ಎಂದು ನೀನು ಹೇಳುತ್ತಿದ್ದೆ. ಇಬ್ಬರೂ ಮಾತನಾಡುತ್ತ ಬಾಣಾವರದಲ್ಲಿ ಇಳಿಯುತ್ತಿದ್ದೆವು. ನನ್ನನ್ನೂ ಕಾಫಿಗೋಸ್ಕರ ನೀನು ಹೋಟೆಲಿಗೆ ಕರೆದುಕೊಂಡು ಹೋಗುತ್ತಿದ್ದೆ. ಆಗ ನಿಮ್ಮನೆಯ ರಸ್ತೆಯ ಕೊನೆಯಲ್ಲೇ ನಾನು ಇರುವೆನೆಂಬುದನ್ನು ನಾನು ಹೇಳುತ್ತಿದ್ದೆ. ಅಲ್ಲದೆ ಮಾರನೆಯ ದಿನ 'ನಮ್ಮನೆಗೆ ಬಂದು ಕಾಫಿ ಕುಡಿದು ಹೋಗಿ' ಎಂದು ನಿನ್ನನ್ನು ಕರೆಯಬೇಕಾಗುತ್ತಿತ್ತು. ನೀನೂ ಮರುದಿನ ಸಾಯಂಕಾಲ ಕಾಫಿಗೆ ಬರುತ್ತಿದ್ದೆ. ಬಂದವನು ನನ್ನ ಮಗಳನ್ನು ನೋಡುತ್ತಿದ್ದೆ. ಸ್ಫುರದ್ರೂಪಿಯಾದ ಕೋಮಲ ಕಂಠವುಳ್ಳ ನನ್ನ ಮಗಳ ಧ್ವನಿಯನ್ನು ಕೇಳಿದವನೇ ನೀನು ಅವಳಲ್ಲಿ ಅನುರಾಗಿತನಾಗುತ್ತಿದ್ದೆ. ಈ ಸ್ನೇಹವನ್ನೇ ಬೆಳೆಸಿ ಬರಲು ಮರಳಿ ಮರಳಿ ನೆಪಮಾಡಿಕೊಂಡು ನಮ್ಮನೆಗೆ ಬರಲು ಶುರು ಮಾಡುತ್ತಿದ್ದೆ. ಕಡೆಗೆ ಒಂದುದಿನ ಧೈರ್ಯವಾಗಿ ನನ್ನೆದುರಿಗೆ ಬಂದು 'ಸ್ವಾಮಿ, ನಿಮ್ಮ ಮಗಳನ್ನು ಮದುವೆಯಾಗಬೇಕೆಂಬ ಹಂಬಲ ಹೆಚ್ಚಾಗಿದೆ. ದಯವಿಟ್ಟು ನನ್ನ ಆಶೆಯನ್ನು ಈಡೇರಿಸುತ್ತೀರಾ' ಎಂದು ಕೇಳುತ್ತಿದ್ದೆ.

ಆ ವೇಳೆಗೆ ಯಾವುದೋ ಸ್ಟೇಷನ್ನು ಬಂತು. ಆತನು ಸಾಮಾನುಗಳನ್ನು ತೆಗೆದುಕೊಂಡು ಬೇಗ ಬೇಗ ಇಳಿದ. ರೈಲಿನ ಕಿಟಕಿಯಾಚೆಯಿಂದ ತನ್ನ ಮಾತನ್ನು ಈ ರೀತಿ ಪೂರೈಸಿದ.

"ಹಾಗೆ ನೀನು ನನ್ನ ಅಳಿಯನಾಗಬೇಕೆಂದು ಕೇಳುತ್ತಿದ್ದೆ. ಆದರೆ ನಿನ್ನನ್ನು— ಒಂದು ಗಡಿಯಾರ ಇಟ್ಟುಕೊಳ್ಳುವಷ್ಟು ಜಾಗರೂಕನಲ್ಲದವನನ್ನು ನಾನು ಹೇಗೆ ಅಳಿಯನನ್ನಾಗಿ ಮಾಡಿಕೊಳ್ಳಲಿ. ನಾನು ಒಪ್ಪುತ್ತಿರಲಿಲ್ಲ. ನಮ್ಮಿಬ್ಬರಿಗೂ ಮನಸ್ತಾಪ ಉಂಟಾಗುತ್ತಿತ್ತು. ಅದಾಗದಿರಲೆಂದೇ ನಾನು ನಿನಗೆ ವೇಳೆ ಇಷ್ಟೆಂದು ಹೇಳಲಿಲ್ಲ.

ಆ ವೇಳೆಗೆ ರೈಲು ಮುಂದುವರಿಯಿತು.

* * *

ಆತನಿಗೆ ಮಗಳೇ ಇಲ್ಲವೆಂದು ನನ್ನ ಸಂಶಯ ಎಂದು ಯುವಕನು ನನಗೆ ಹೇಳಿದ.

"ಮಗಳಿದ್ದಿರಬಹುದು ಆದರೆ ಆತನ ಹತ್ತಿರ ಗಡಿಯಾರವಿತ್ತಿಲ್ಲ" ಎಂದು ನಾನಂದೆ.

## ಮಣ್ಯಂ ಕಂಪನಿಯವರ ತಯಾರಿಕೆಗಳು




ಮಣ್ಯಂ ಕಂಪನಿಯವರ ಸ್ನೋ, ಹೇರ್ ಆಯಿಲ್ ಮತ್ತು ಸೋಪ್ ಕರ್ನಾಟಕದಲ್ಲೆಲ್ಲ ಪ್ರಸಿದ್ಧಿ ಪಡೆದಿವೆ. ಅನೇಕ ವಸ್ತು ಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಪಡೆದಿವೆ. ಸೌಂದರ್ಯೋಪಕರಣಗಳಲ್ಲಿ ಇವಕ್ಕೆ ಮಿಗಿಲೆನಿಸುವವು ಬೇರೆ ಯಾವವೂ ಇಲ್ಲ ಎನಿಸಿಕೊಂಡಿವೆ. ಒಂದು ಸಾರಿ ಪರೀಕ್ಷಿಸಿ ನೋಡಿ, ತಾನೇ ತಿಳಿಯುತ್ತೆ !!




## ಮಣ್ಯಂ ಅಂಡ್ ಕಂಪನಿ, ಮದ್ರಾಸು.

# ಅಗಸನ ಆಗುಹೋಗುಗಳು



"ಅಣ್ಣಾ, ಯಾರೋ ಬಂದಿದ್ದಾರೆ" ಎಂದು ನನ್ನ ಆರನೆಯ ಮಗ (ಹೆಸರು ಚೀಮು; ವಯಸ್ಸು ೫; ಜಾತಿ ಹಳೇ ಕರ್ನಾಟಕ; ಜನ್ಮಸ್ಥಳ ಬೆಂಗಳೂರು) ಸದ್ದುಮಾಡದೆ ಕಿವಿಯಲ್ಲುಸುರಿದ. ಇಂತಹವರನ್ನು ನಾನು ನೇರವಾಗಿ ಒಳಕ್ಕೆ ಬರಮಾಡಿಕೊಳ್ಳುವುದಿಲ್ಲ. ಆಗಂತುಕರು ಈ ಗಂತುಕರು—ಯಾರು, ಏಕೆ, ಎತ್ತ, ಏನು ಎಂಬುದನ್ನು ತಿಳಿದ ಮೇಲೆ ನಾನು ಮನೆಯಲ್ಲಿದೇನೆಯೇ ಇಲ್ಲವೇ, ನನಗೆ ಜ್ವರ ಬಂದಿದೆಯೇ ಇಲ್ಲವೇ, ನಾನು ಸ್ನಾನ ಮಾಡುತ್ತಿದೆನೆಯೇ, ಸಂಧ್ಯಾವಂದನೆ ಮಾಡುತ್ತಿದೇನೆಯೇ, ಎಂಬಿವೇ ಮುಂತಾದುವುಗಳನ್ನು ನಿರ್ಧರಿಸಬೇಕಾಗುತ್ತದೆ. ಅದಕ್ಕಾಗಿ ನಾನು ಮೆಲ್ಲನೆದ್ದು, ಕಿಟಕಿ ಬಾಗಿಲಿನ ರಂಧ್ರದಿಂದ ದೃಷ್ಟಿಯನ್ನು ಹೊರಗಿಸಿದೆ. (ಹೇಗಿದೆ, ಹೊಸ ಮಾತು?) ಅಪರಿಚಿತ, ಕಷ್ಟಜೀವಿ, ದೇಹಿ ಎಂಬೋ ಭಂಗಿ! ಸರಿ! ನಾಲ್ಕು ಮಾತಾಡಿ ನಾಸ್ತಿ ಅಂತ ನಾಲಿಗೆ ಪ್ರಯೋಗಿಸೋಣ ಅಂತ ಬಾಗಿಲು ತೆಗೆದು ಒಳಕ್ಕೆ ಕರೆದು ಕೂರಿಸಿದೆ.

"ಈಗ ತಾವು ಎಲ್ಲಿಗೆ ಕಳುಹಿಸೋಣವಾಗುತ್ತಿದೆ, ಮೈಲಿಗೆಯನ್ನ?" ಅಂದ.

"ಅಯ್ಯೋ! ಯಾವುದೋ ಲಾಂಡ್ರಿಗೇನೇ! ನೂರೆಂಟು ತರಲೆ ತಾಪತ್ರಯಗಳು....ಅದರ ವಿಚಾರ ಯಾಕೆ ಈಗ?"

"ಇನ್ನೇನೂ ಇಲ್ಲ. ತಮ್ಮ ಬಟ್ಟೆಬರೆಗಳನ್ನು ಒಗೆಯುವ ಸೇವೆ ನನಗೆ ದೊರೆಯಬೇಕೆಂದು ಬಂದಿದೇನೆ."

"ನೀವು ಮಾಡುವ ವಿಶೇಷ ಅನಾಹುತಗಳು ಯಾವಯಾವುದು, ಅಗಸತನದಲ್ಲಿ?"

"ಅರ್ಥವಾಗಲಿಲ್ಲ!"

"ಪಂಚೆಗಳ ಅಂಚಿನ ಕೆಂಪನ್ನ ಉದ್ದಕ್ಕೂ ಹರಡಿಸುತ್ತೀರೇನು?'

"ಛೆ! ಛೆ! ಅಗ್ಗವಾದ ಪಂಚೆಗಳ ವಿಷಯದಲ್ಲಿ ನಾವು ಬಹಳ ಜಾಗರೂಕರಾಗಿರುತ್ತೇವೆ"

"ದೊಡ್ಡ ಮಗನ ಅಂಗಿಯನ್ನ ಅವನ ಅರ್ಧಾಂಗಿ ಮಾಡಿಬಿಡಿತ್ತೀರೋ?"

"ಹಹ್ಹ! ತಾವು ತಮಾಷೆ ಮಾಡುತ್ತಿದೀರಿ! ಎಲ್ಲಾದರೂ ಉಂಟೆ? ಸಾಧ್ಯವೇ?"

"ನಾಲ್ಕು ಟವಲ್ ಹಾಕಿದರೆ ನೀವು ತರುವುದು ಎಷ್ಟು? ಎರಡೋ? ಅಥವಾ ಒಂದೆರಡನ್ನು ಹರಿದು ಆರು ತರುತ್ತೀರೋ?"

"ಹಾಗೆ ಮಾಡಿದರೆ ಉಳಿಗಾಲವೆಲ್ಲಿ?"

"ಬಟ್ಟೆ ಯಾರದು ಅಂತ ನಿಮ್ಮ ಗುರುತು ನೀವು ಹಾಕುವುದು ಹೇಗೆ! ಅಂಗೈಯಗಲದಷ್ಟು ಕಪ್ಪುಗೆರೆ ಎಳೆಯುತ್ತೀರೋ, ಕೆಂಪು ನೂಲನ್ನು ಇಲ್ಲಿಂದ ಅಲ್ಲಿಯವರೆಗೆ ಹೊಲೆದು ಹಾಳುಮಾಡುತ್ತಿರೋ?"

"ಅಯ್ಯೋ! ಅಯ್ಯೋ! ನಾವೇನು ಕಪ್ಪಿಗರೇ, ಚಿಪ್ಪಿಗರೇ?"

"ಇಲ್ಲಿ ಕೇಳಿ ಇಲ್ಲಿ! ಕೊಟ್ಟದ್ದಕ್ಕಿಂತ ಕೊಳೆಯಾಗಿ ತರುತ್ತಿರೋ, ಬಟ್ಟೆಗಳನ್ನ? ಮಡಿಸಿದರೆ ಮಡಿ, ಅಂತ!"

ಅದು ನಮ್ಮ ರಜಕ ಧರ್ಮಕ್ಕೆ ವಿರೋಧ"

"ಒಬ್ಬರ ಬಟ್ಟೆಯನ್ನು ಮತ್ತೊಬ್ಬಬ್ಬರಿಗೆ ಉಡಿಸಿ ನೋಡುವ ಚಪಲ ಇದೆಯೇ ನಿಮಗೂವೆ?"

"ನಮಗೆ ಯಾಕೆ ಸ್ವಾಮಿ, ಅಂತಹ ಅದಲುಬದಲು ವ್ಯಾಪಾರ?"

"ನಿಮ್ಮ ನೆಂಟರಿಗೆ ಯಾರಿಗಾದರೂ ಖಾಯಿಲೆ ಇದೆಯೇನ್ರಿ? ಯಾಕೆಂದರೆ, 'ಅವರಿಗೆ ತೀರ ನಿತ್ರಾಣ,' 'ಊರಿಗೆ ಹೋಗಿದ್ದೆ, ತಡವಾಯಿತು,' ಅಂತ ನೆಪ ತೆಗೆಯುತ್ತೀರೋ?"

"ಛೆ! ಛೆ! ನಮ್ಮ ನೆಂಟರೆಲ್ಲ ಆಗಲೇ ಸತ್ತುಹೋಗಿದ್ದಾರೆ. ಇನ್ನು ಅವರಿಗೆ ಪ್ರಾಣ ಹೋಗುವ ಸಂಭವವೇ ಇಲ್ಲ."

"ಸರಿ! ಹಾಗಾದರೆ, ನಿಮ್ಮ ಲಾಂಡ್ರಿ ಎಲ್ಲಿ?"

"ಪೆಟ್ರೋಲ್ ಪಂಪಿನ ಹತ್ತಿರ.... ಇಲ್ಲೇ"

"ನಿಮ್ಮ ಲಾಂಡ್ರೀನೂ ಅಲ್ಲೇ ಇದೆಯೇನು? ಮತ್ತೆ ಯಾವತ್ತೂ ನನ್ನ ದೃಷ್ಟಿಗೆ ಬಿದ್ದಿಲ್ಲವಲ್ಲಾ........!"

"ನಮ್ಮ ಅಂಗಡಿ ಮೇಲೆ ತಮ್ಮ ಕರುಣೆ ಬಿದ್ದಿಲ್ಲ, ನಾವೇನು ಮಾಡೋದು? ಯಾರೋ ಪುಂಡರು ಪೋಕರಿಗಳು ತಮ್ಮ ಸೇವೆ ಮಾಡುತ್ತಿದ್ದಾರೆ!"

"ನಿಮ್ಮ ಲಾಂಡ್ರಿ ಹೆಸರೇನು?"

"ನಿರ್ಮಲ ಲಾಂಡ್ರಿ"

"ನಿರ್ಮಲ ಲಾಂಡ್ರಿ! ಈಗ ನಾವು ಬಟ್ಟೆ ಬರೆ ಕಳುಹಿಸುತ್ತಾ ಇರುವುದು ಅಲ್ಲಿಗೇನೇ ಅಂತ ಕಾಣುತ್ತೆ ಅಲ್ಲವೇನೋ ಸುಬ್ಬೂ............"

ಸುಬ್ಬು ಒಳಗಿನಿಂದ "ಹುಂ" ಅಂದ.

ಆಗಂತುಕ ಹೇಳದೆ ಕೇಳದೆ ಹೋಗಂತುಕನಾದ.

---

ವೈದ್ಯರೊಬ್ಬರ ದವಾಖಾನೆಯಲ್ಲಿ ಸ್ವರ್ಗಲೋಕದ ನಿವಾಸಿಗಳ ಚಿತ್ರಪಟಗಳನ್ನು ಪ್ರದರ್ಶಿಸಿರುವರಂತೆ.

—ಪರಲೋಕದವರ ಪಟಗಳನ್ನು ಹಾಗೆ ತೋರಿಸುವುದು ಒಳ್ಳೆಯದೇ ಎಂದು ನಮಗೆ ಸಂದೇಹ ಬರುತ್ತದೆ.

# ಕಾಲಭೈರವಿ

ರಾಮೋತ್ಸವದ ಅವಾಂತರ. ಕೋಸುಂಬರಿ ತಿಂದು ಪಾನಕ ಕುಡಿದು ಬೆವರಿಳಿಸಿ ಬಸವಳಿದು ಬಾಡಿ ಬೆಂಡಾಗಿ ಬಿದ್ದಿದ್ದೆ. ಅರೆನಿದ್ದೆಯನ್ನು ಎದುರು ನೋಡುತ್ತಿದ್ದೆ. ಯಾರೋ ಮನೆ ಹೊರಗಡೆ ಬಂದು "ರಘುಪತಿ ರಾಘವ ರಾಜಾರಾಂ........ ಪತೀಥ ಪಾವನ ಶೀತಾರಾಮ್" ಅಂತ ಕಾಡಲು ಮೊದಲುಮಾಡಿದರು. ನಾಲ್ಕು ಹುಡುಗರು ಪಠಸಹಿತವಾಗಿ ಹೊಸಲಿಂದ ಇನ್ನೂ ಹತ್ತುನೂರು ದೂರದಲ್ಲೇ ನಿಂತಿದ್ದರು. ಬೆಳಗಾದಲಾಗಾಯ್ತು ಆಗಲೇ ಇಂತಹ ಹತ್ತುಹನ್ನೆರಡು ಯಾಚನಾ ತಂಡಗಳು ಬಂದು ಹೋಗಿದ್ದರಿಂದ, ನನಗೆ ಕೊಂಚ ಕಾವೇರಿತು. "ಮಳೆ ಬಿದ್ದ ಕೂಡಲೇ ನೆಲದೊಳಗಿಂದ ಗೆದ್ದಲ ಹುಳಗಳು ಹಾರಿಬರುವ ಹಾಗೆ ಈ ಕಿಶೋರಕೀಟಗಳು ನವಮಿನವಮಿಗೂ ಎಲ್ಲಿಂದ ದೂರಿ ಬರುತ್ತವೆ?" ಎಂದು ನಾನು ಮನಸ್ಸಿನಲ್ಲೇ ಮೂಗಿನಮೇಲೆ ಬೆರಳಿಟ್ಟೆ. ಬೆಳಗಿನ ಭಜಕರನ್ನೆಲ್ಲಾ ಯಥಾಪ್ರಕಾರ 'ಮನೆಯಲ್ಲಿ ಯಾರೂ ಇಲ್ಲ,' 'ಯಾರೂ ಇನ್ನೂ ಎದ್ದಿಲ್ಲ,' 'ಕೂಗಬೇಡಿ! ಮನೆಯವರಿಗೆಲ್ಲ ಖಾಯಿಲೆ,' 'ಅಕ್ಕಿ ಇನ್ನೂ ತಂದಿಲ್ಲ,' 'ಚಿಲ್ಲರೆ ಇಲ್ಲ,' ನಮಗೆ ರಾಮನವಮಿ ಈಗಲ್ಲ' ಎಂಬ ನೆಪಗಳಿಂದ ಆಚೆಗೆ ಕಳುಹಿಸಿದ್ದೆ. ಹಳೆಯ ರಾಗಗಳನ್ನೇ ಹಾಡಿ ನನಗೂ ಬೇಸರವಾಗಿತ್ತು. ಒಂದು ನವನವೀನ ನೆಪ ತೆಗೆದು ಈ ನಾಲ್ವರನ್ನು ಪಠಸಹಿತವಾಗಿ ಓಡಿಸಬೇಕೆಂದು ನಾನು ನಿಶ್ಚಯಿಸಿದೆ.

ಮಲಗಿದ್ದ ಕಡೆಯಿಂದಲೇ, ಆಳವಾಗಿ, ನೀಳವಾಗಿ ಬೊಗುಳಿದೆ. ನಿಜ, ಸುಳ್ಳಲ್ಲ. ಸೊಗಸಾದ ನಾಯಿ ಹಸಿದಾಗ ಹೇಗೆ ಬೊಗಳುವುದೋ ಹಾಗೆ! 'ಕಾಲಭೈರವಿ' ರಾಗ ಅಂದರೆ ನನ್ನಹಾಗಿನ ಕೊರಳು ಯಾವ ಹುಟ್ಟು ಕುನ್ನಿಗೂ ಇರಲಾರದು.

ತಕ್ಷಣವೇ ಮೂರು ಹುಡುಗರ ಬುದ್ಧಿ ತಲೆಯಿಂದ ಕಾಲಿಗಿಳಿಯಿತು. ಪಠಸಹಿತ ಪಲಾಯನ ಮಾಡಿದರು. ಆದರೆ, ಮತ್ತೊಬ್ಬ ಮಾತ್ರ ಅಲ್ಲೇ ನಿಂತು "ಯಾಕ್ರೋ, ಹೇಡಿಗಳ್ರಾ! ಬನ್ರೋ" ಎಂದು ಕೂಗಿದ. "ಹೀಗೆ ಬೊಗಳುವ ನಾಯಿ ಕಚ್ಚುವುದಿಲ್ಲ; ನನಗೆ ಗೊತ್ತು" ಅಂದ.

ನಾನು ನಾಚಿಕೆಯಿಂದ ತಲೆ ತಗ್ಗಿಸಿದೆ. ಬೊಗುಳಿದ್ದು ನಾನು, ನಾಯಿ ಅಲ್ಲ ಅಂತ ಆ ಹುಡುಗ ಹೇಗೆ ಕೇಳಿಹಿಡಿದ? ಅಥವಾ. ಬರೀ ಗಾದೆಯನ್ನೇ ನೆಚ್ಚಿಕೊಂಡು ಆ ಹೈದ ಕುರುಡು ಧೈರ್ಯ ತಾಳಿದನೋ ? ಹೇಗಾದರೂ ಆಗಲಿ, ಅಂತ ತೀರ್ಮಾನಿಸಿ ಮತ್ತೊಂದುಸಾರಿ ಶುನಕನಾದೆ. ಶಾರೀರ ಶುದ್ಧವಾಗಿತ್ತು. ಮೇಲಿನ ಶತ್ರಿಯಲ್ಲೇ ಕೆಲಸಮಾಡಿದೆ.

ಆಗ, ಅಲ್ಲೇ ನಿಂತಿದ್ದ ಹುಡುಗ "ಬನ್ರೋ! ನಾಯಿ ಅಲ್ಲ ಕಣ್ರೋ ಅದು! ಯಾರೋ ಒಳಗಿಂದ ನಾಯಿಯ ಹಾಗೆ ಬೊಗಳುತ್ತಿದಾರೆ, ಅಷ್ಟೇ............ಅಂದ ............ಇನ್ನೇನು ಮಾಡುವುದು, ಬಾಯಿಮುಚ್ಚಿಕೊಂಡು ಒಂದು ಪಾವು ಅಕ್ಕಿ ಸುರಿದುಬಂದೆ.

—ನಾ. ಕೆ.

# ಸಾಗರ್ ಟಾಕೀಸ್

ಬೆಂಗಳೂರು

## ಅಮೋಘ 4 ನೇ ವಾರ

## ತಾ|| ೧೧-೬-೪೨ ರಿಂದ

ಸಾರಥಿಯವರ



ತಾರಾಗಣ:

**ಕೆ. ಎಸ್. ಪ್ರಕಾಶರಾವ್-ಋಷ್ಯೇಂದ್ರಮಣಿ-ಹೈಮವತಿ**

---

Distributors:

**SARASWATHI TALKIES LTD.,**

**BEZWADA - BANGALORE.**

Printed at : Prajamata Power Press, Bangalore City and Published by :
B. N. GUPTA - Editor: Dr. R. SHIVARAM.